# ರಾಗಮಿಲನ

'ಧನ್ವಂತ'





ಎಚ್. ಎನ್. ರಾವ್ ಬ್ರದರ್ಸ್, ಬೆಂಗಳೂರು ನಗರ

# ರಾ ಗ ಮಿ ಲ ನ

(ಕವನ ಸಂಗ್ರಹ)

ಶ್ರೀಮಾನ್

**ದೇ ವು ಡು ರ ವ ರ**

ಮುನ್ನುಡಿಯೊಡನೆ

**"ಧನ್ವಂತ"**

# ಮುನ್ನುಡಿ

ಸಾಹಿತ್ಯವು ಯಾವಾಗಲೂ ಸಹೃತ್ತುಗಳ ಸ್ವತ್ತು. ತರ್ಕವ್ಯಾಕರಣಾದಿ ಶಾಸ್ತ್ರಜ್ಞರನ್ನು ನಿರಾಕರಿಸಿ ಕಾವ್ಯಕನ್ನಿಕೆಯು ರಸಜ್ಞನನ್ನು ವರಿಸಿದಳೆಂದು ಸಂಸ್ಕೃತದಲ್ಲಿ ಒಂದು ಚಾಟೂಕ್ತಿಯುಂಟು. ಅದರಂತೆ ಸಾಹಿತ್ಯವು ಹುಟ್ಟಿ ಬೆಳೆದು ಮೆರೆಯುವುದಕ್ಕೆ ಸಹೃದಯರೆಂಬ ಕ್ಷೇತ್ರವು ಬೇಕು. ಕನ್ನಡವು ಈ ೨೫ ವರ್ಷಗಳಿಂದ ಬೆಳೆಯುತ್ತಿದೆಯೆಂಬುದು ನಿರ್ವಿವಾದವಾಗಿದ್ದರೂ, ವರ್ಷಾಕಾಲದ ಪ್ರಥಮ ದಿನಗಳಲ್ಲಿ ಸಣ್ಣಸಣ್ಣ ಹಳ್ಳಗಳಲ್ಲಿ ನಿಲ್ಲಲೋ ಬೇಡವೋ ಎಂದು ನಿಂತಿರುವ ನೀರಿನಂತೆ, ಕವಿಗಳಿಗೂ ಗ್ರಂಥಕರ್ತರಿಗೂ ಸಲ್ಲುತ್ತಿರುವ ಪ್ರೋತ್ಸಾಹವು ಸ್ವಲ್ಪವಾಗಿದೆ. ಇದು ತಪ್ಪಿ, ಸಾಹಿತ್ಯ ಪ್ರೋತ್ಸಾಹವು ಬೆಳೆದು ವಾಹಿನಿಯಾಗಿ ಹರಿದು ಕವಿಗಳೂ ಗ್ರಂಥಕರ್ತರೂ ಸ್ವಾವಲಂಬಿಗಳಾಗಿ ಬದುಕಬೇಕಾದರೆ, ಸಹೃದಯರಾದ ರಸಿಕವರ್ಗವು ಬೆಳೆಯಬೇಕು. ಅಂಥಾ ಕಾರ್ಯಕ್ಕೆ, ಎಂದರೆ ಸಹೃದಯರಾದ ಗೆಳೆಯರ ಗುಂಪುಗಳು ಬೆಳೆಯುವುದಕ್ಕೆ ಇಂತಹ ಕಾವ್ಯಗಳು, ಹಾಡುಗಳು ಬಹಳ ಬೇಕು.

ರಾಗಮಿಲನವೆಂಬ ಈ ಕಾವ್ಯಗುಚ್ಛಕ್ಕೆ ಈ ದೃಷ್ಟಿಯಿಂದ ಮನ್ನಣೆ ದೊರೆಯುವುದು ಎಂದು ನನ್ನ ನಂಬಿಕೆ. ಇದರಲ್ಲಿರುವ ಹಾಡುಗಳನ್ನು ಓದಿ, ಓದಿಸಿ ಕೇಳಿ ಆನಂದಪಟ್ಟಿದ್ದೇನೆ. ಈಗಾಗಲೇ ಇವೆಲ್ಲ ಮಾಸಪತ್ರಿಕೆಗಳಲ್ಲಿ ಪ್ರಕಟವಾಗಿ, ಜನರಲ್ಲಿ ಪ್ರಚಾರವಾಗಿವೆ. ಹಾಡುವುದಕ್ಕೆ ಒಗ್ಗುವುದು ಈ ಕವಿತೆಗಳಲ್ಲಿ ಇರುವ ಗುಣಗಳಲ್ಲಿ ಒಂದು. ಒಳ್ಳೆಯ ಕವಿತೆಯಲ್ಲಿ ಇರಬೇಕಾದ ನಾದಮಾಧುರ್ಯ, ಅರ್ಥಸೌಂದರ್ಯ, ಭಾವಾದಿಗಳೂ ಇವೆ. ಅಲ್ಲಲ್ಲಿ ಮುದ್ರೆಗಳು ಕೆಲವು ಹಿರಿಯ ಕವಿಗಳದು ಎನ್ನುವಂತಿವೆ. ಬೇಂದ್ರೆ, ಪುಟ್ಟಪ್ಪ, ವಿ. ಸೀ., ತಿ. ನಂ. ಶ್ರೀಕಂಠಯ್ಯ ಮೊದಲಾದವರನ್ನು ಕಿರಿಯರು ಅನುಸರಿಸಿದರೆ, ಅವರ ಪದ್ಯಗಳ ಛಾಯೆಯು ತರುಣ ಕವಿಗಳ ಕಾವ್ಯಗಳಲ್ಲಿ ಮೂಡಿದರೆ ಅದೂ ಗುಣವೆಂದೇ ನನ್ನ ಭಾವನೆ.

'ಧನ್ವಂತ'ರು ನನಗೆ ತಿಳಿದಮಟ್ಟಿಗೆ ರಾಜಕೀಯ ಪ್ರಪಂಚವನ್ನು ದೂರಬಿಟ್ಟವರಾದರೂ ರಾಜಕೀಯಪಟುಗಳಷ್ಟೇ ಸ್ವಾತಂತ್ರ್ಯಪ್ರಿಯರಾಗಿ, ಕೆಲವು ಮಾತುಗಳನ್ನೂ ಭಾವಗಳನ್ನೂ ಉಪಯೋಗಿಸುವಾಗ ಒಂದು ಸ್ವಾತಂತ್ರ್ಯವನ್ನು ವಹಿಸಿದ್ದಾರೆ. ಈಗ ಸ್ವಾತಂತ್ರ್ಯದ ಹಂಬಲು ತಾನೇ ತಾನಾಗಿರುವಾಗ, ಇವರು ಅವಲಂಬಿಸಿದ ಸ್ವಾತಂತ್ರ್ಯವು ಅಪ್ರಿಯವೆಂದು ಹೇಳುವುದು ಕಷ್ಟ. ಮುಚ್ಚಂಜೆ, ವಸಂತ ಶಬ್ದಗಳಿಗೆ ಅವರು ಪ್ರಾತಸ್ಸಂಧ್ಯಾ, ಸುಗ್ಗಿ ಎಂಬ ಅರ್ಥಮಾಡಿದ್ದಾರೆ. ಹೀಗೆ ಶಬ್ದಗಳಿಗೆ ಹೊಸ ಹೊಸ ಅರ್ಥ ಗಳನ್ನು ಕಟ್ಟುತ್ತಿರುವುದು ಆಧುನಿಕ ಕವಿಗಳಿಗೆ ಸಹಜವಾಗಿದೆ. ನಡೆವ ನೆಡಹುವನಲ್ಲದೆ ಕುಳಿತವ ನೆಡಹುವನೆ ಎಂಬ ಗಾದೆಯನ್ನು ನೆನೆದು, ಇದಕ್ಕಾಗಿ ಮನಸ್ಸನ್ನು ಕಾಷಾಯಪಡಿಸಕೊಳ್ಳದಿರುವುದೇ ಚೆಂದವೆಂದು ನನ್ನ ಭಾವನೆ.

'ಧನ್ವಂತ' ಕವಿತ್ವದ ಹುಚ್ಚು ಹಿಡಿದಿದೆ; ಕವಿಗಳಾಗುವ ಯೋಗ್ಯತೆಯೂ ಇದೆ. ಕವಿಗಳು ಯಾವಾಗಲೂ ಪೂಜಾರಿಯ ಕೈಯ ದೇವರಂತೆ ಪ್ರೋತ್ಸಾಹವನ್ನು ಅವಲಂಬಿಸಿರುವವರು ಎಂಬ ನಾಣ್ಣುಡಿಗೆ ಅಪವಾದಗಳು ಬಹಳ ಬಹಳ ಕಡಿಮೆ. 'ಧನ್ವಂತ'ರು ಅಪವಾದವರ್ಗದಲ್ಲಿ ಬಂದರಂತೂ ನನಗೆ ಬಹಳ ಸಂತೋಷ. ಅಂತೂ ಅವರ ಕವಿತಾತರುವು ಬೆಳೆದು ಅರಳಿ ಹೂ ಕಾಯಿ ಹಣ್ಣುಗಳನ್ನು ಬಿಟ್ಟು ಕನ್ನಡ ನಾಡಿನ ಭೂಷಣವಾಗಲಿ.

ಅಕ್ಟೋಬರ್ ೧೮, ೧೯೪೩. **ದೇವುಡು.**

# ಅರಿಕೆ

ಈ ಕವನ ಸಂಗ್ರಹದಲ್ಲಿನ ಅನೇಕ ಕವನಗಳು ಈ ಮೊದಲೇ 'ಸುಬೋಧ,' 'ಕಥಾಂಜಲಿ,' 'ಕಥಾವಳಿ' ಮತ್ತು 'ಪ್ರಜಾಮತ'ದ ವಿಶೇಷ ಸಂಚಿಕೆಗಳಲ್ಲಿ ಅಚ್ಚಾಗಿದ್ದವುಗಳು. ನನ್ನ ಕವನಗಳಿಗೆ ತಂತಮ್ಮ ಪತ್ರಿಕೆಗಳಲ್ಲಿ ಆಸರೆಯನ್ನು ಕೊಟ್ಟ ಸಂಪಾದಕರೆಲ್ಲರನ್ನೂ ನಾನು ಸ್ಮರಿಸುತ್ತೇನೆ.

ನನ್ನ ಕೃತಿಗಳಲ್ಲಿ ವಿಶೇಷವಾದ ಕೃಪೆಯನ್ನೂ ಪ್ರೇಮವನ್ನೂ ತೋರಿ ಪುರೋಭಿವೃದ್ಧಿಯನ್ನು ಕೋರಿ, ಮುನ್ನುಡಿಯೊಂದನ್ನು ಬರೆದುಕೊಟ್ಟು ಉಪಕಾರಮಾಡಿರುವ ಶ್ರೀಮಾನ್ ದೇವುಡು ನರಸಿಂಹಶಾಸ್ತ್ರಿ, ಎಂ.ಎ., ಅವರಿಗೆ ನಾನು ಚಿರಋಣಿ.

ಹೊದಿಕೆಯ ಪುಟದ ಚಿತ್ರವನ್ನು ಬರೆದುಕೊಟ್ಟ ಶ್ರೀ ರಾಘವೇಂದ್ರ ರಾಯರಿಗೂ ಅಂದವಾಗಿ ಮುದ್ರಿಸಿ ಸಹಕರಿಸಿದ "ಮೋಹನ್ ಪ್ರೆಸ್" ವ್ಯವಸ್ಥಾಪಕರಿಗೂ ನನ್ನ ಹೃತ್ಪೂರ್ವಕ ವಂದನೆಗಳು.

**"ಧನ್ವಂತ."**

# ಪರಿವಿಡಿ

# ಅ ರ್ಪ ಣೆ

ಪೂಜ್ಯ ನನ್ನ ತಂದೆಯವರಿಗೆ

—"ಧನ್ವಂತ."

# ರಾಗಮಿಲನ

ಮುದುವೀಣೆ ತಂತಿಗಳ ಮಿಡಿಮಿಡಿದು ನುಡಿಸಿದೆನು,
ಸ್ವರರಾಗ ಸವಿಸುಧೆಯ ಮಡುವಿನಲಿ ಬೆರೆಸಿದೆನು;
ಚಲುಓಟ, ಬೆರಳಾಟ, ಮಿಡಿಯುತಿತು ನುಡಿಯ,
ಮುದುಭಾವ, ಕೊನೆನೋಟ, ಕೂಡುತಿತು ಮನವ;

ನುಡಿಗೆಲವು, ಮೆಲುಚೆಲುವು, ಮೇಳದಲಿ ಸರಿದು,
ಎಡುವಿನಲಿ, ಇಳಿತದಲಿ, ಆಸರಿಸಿ ಮೆರೆದು;
ಅಲೆದಾಟ, ಸೆಳೆದಾಟ, ದಾಯದಲಿ ಸಿಲುಕಿ;
ಪಲ್ಲವದಿ ಲಹರಿಯಲಿ ಮನವಿಟ್ಟು ಮೆಲುಕಿ,
ಮೋದದಲಿ ಕೂಡಿದೆನು ತಾಳದಲಿ ನೋಟ;
ತನ್ಮಯದಿ ರಾಜಿಸಿದೆ ನಾದದಲಿ ಕೂಟ,
ಹೃದಯದಲಿ ಮೀಟುತಿತು ಮಾಗಧನವಾಣಿ,
ವೇಗದಲಿ ನೋಡಿದೆನು ರಾಗ-ಸುಧೆರಾಣಿ;

ಮುದುವೀಣೆ ಮಿಲನದಲಿ ರಂಜಿಸಿದೆ ಭಾರಿ,
ಪ್ರಭೆಮಿರುಗು ವದನದಲಿ ಮೆಲುನಗೆಯ ತೋರಿ.

---

# ಜೀವಜ್ಯೋತಿ !

ಜೀವಜ್ಯೋತಿ ಮಿನ್ನುಗುತಿತ್ತು
ರಾಗದೊಲುಮೆ ತೋರಿ,
ಭಾವಬಹಳ ಬೀರುತಿತ್ತು
ಮೆರೆಗನೊರೆಯ ಹಾಡಿ ;

ಮನದ ಮುದವ ತೋರುತಿತ್ತು
ಧ್ಯೇಯ ದೂರ ಸೇರಿ,
ಮಾಯರಂಗನೇರಿ ಬಂದು
ಎದೆಯ ಹರುಷ ಹೂಡಿ ;

ಕಣ್ಣನೋಟ ಚನ್ನಚಲುವ
ಈಟಿ ಮಾಟ ನೋಡಿ,
ರಂಗಮುಗಿಲ ಬಿಂಬವೇರಿ
ಜತೆಯ ಸೇರಿ ಹಾರಿ ;

ಸಣ್ಣರಾಗ ತಂತಿಮಿಡಿದು
ಮೋರೆ ಮೊಗ್ಗು ಬೀರಿ,
ಪ್ರಕೃತಿವೃಂದ ವೃಕ್ಷವೇರಿ
ಲಹರಿ ನಲ್ಮೆ ತೂರಿ ;

ಜೀವಜ್ಯೋತಿ ಮಿನುಗುತಿತ್ತು
ಲೀಲೆ ಹಿಗ್ಗು ಹಾಡಿ.

---

# ಪ್ರೇಮಿಗಳು

ಸಂಧ್ಯಾರಾಗದ ಸಮಯದಲಿ
ಪ್ರಶಾಂತಸಾಗರ ತೀರದಲಿ
ಸೇರಿದರೂ
ಪ್ರೇಮಿಗಳು.
ದಿಗಂತಧಾಮವ ದೂಡಿದರು
ಪತೀತಪಾವನ ಸಾರಿದರು
ರಾಗದಲೀ
ಪ್ರೇಮಿಗಳು.
ನೀಲಾಗಗನವ ಸೇರಿದರು
ಮುಗಿಲಾಮಯವನು ನೋಡಿದರು
ಒಲುವಿನಲೀ
ಪ್ರೇಮಿಗಳು.
ಚಲುವಾಚುಕ್ಕಿಯ ನೋಡಿದರು
ಗೆಲುವಾಮೊಗವನು ಬೀರಿದರು
ನಲ್ಮೆಯಲೀ
ಪ್ರೇಮಿಗಳು.
ಚಂದ್ರಾಬಿಂಬದಿ ನೆಲೆಸಿದರು
ತಮ್ಮಾಹೃದಯವ ಬೆರೆಸಿದರು
ಕಾಂತಿಯಲೀ
ಪ್ರೇಮಿಗಳು.
ಸೌಹಾರ್ದಸಮ್ಮೇಲನ ಸಾರಿದರು
ಹೃದ್ಗತಜ್ವಾಲೆಯ ಹೊಳೆಸಿದರು
ಒಗೇತನದಿ
ಪ್ರೇಮಿಗಳು.
ಮೃದುಮಧುರವನು ಕೋರಿದರು
ಪ್ರಶಾಂತ ಪರಿಮಳ ಸಾರಿದರು
ಸಿದ್ಧದಲೀ
ಪ್ರೇಮಿಗಳು.

# ಉದಯ

೧

ಉದಯ ಉದಿಸಿ, ಚಲುವ ಹರಿಸಿ, ನಾಡಸೊಬಗ ಮೆರೆಸಿತು;
ಹರುಷ ತಂದು, ವಲಿಸಿ ಮೆರೆದು, ಸ್ವರ್ಣಮೆರಗ ಹೊಳೆಸಿತು;
ಪೂರ್ವತಡಿಯ ವರ್ಣಕಲಿಸಿ,
ಕಿರಣಕಾಂತಿ ಮೆರೆಸಿವಲಸಿ;
ಹೊನಲ ಹೊಳೆಯು ಸರಿಸಿ ನಲಿಸಿ,
ಮೆರಗಿಹರಿದು, ಸಲಿಲಸಂದು, ನಭದ ಅರುಗನೇರಿತು,
ಸ್ಮಿತದ ವದನ, ರವಿಯ ಕಿರಣ, ಭುವಿಯ ಬಯಲ ಸಾರಿತು.

೨

ನೀಲಗಗನ, ಮೇಘಮುಗಿಲು, ಸರಿದು ಕಲಕಿ ಶಿಥಲಿತು;
ಪೂರ್ವತಡಿಯ, ಉದಯಭಾನು, ನಡುವೆದೂರಿವಲೆಸಿತು;
ಮಾಯರಂಗನೇರಿಹಕ್ಕಿ,
ಉದಯ ಚಲುವ ಸರಿಸಿನಕ್ಕಿ;
ಗೆಲುವ ಮೊಗವಬೀರಿ ಕುಕ್ಕಿ,
ಬನದ ಸಿರಿಯ, ಸೊಗವ ತೋರಿ, ಮೆರೆದು ಭರದಿ ಸಾಗಿತು,
ಸಲಿಲಸೊಂಪು, ರವದಗುಂಪು, ನೆರೆಯುಮರೆಯ ತಾಕಿತು.

೩

ಹಸುರು ಹೊಲದ, ಮೇಳೆಮುಗುಳು, ಬಿರಿದು ಅರಳಿ ಒಡೆಯಿತು ;
ಅನಿಲ ಬೆರೆದು, ಮುಗುಳಕಂಪು, ಸವಿಯಸೊಂಪು ತಂದಿತು ;
ಮುಗುಳು ಅರಳಿ ಭ್ರಮರಹಾರಿ,
ಸುಧೆಯಹೀರಿ ರಕ್ಕೆಬೀರಿ ;
ಗೆಲುವಿನಿಂದ ಮುಗಿಲನೇರಿ,
ಅರಳುಮುಗುಳು, ಸವಿಯಹಸುರು, ಹೊಳೆಸಿ ಸೆಳೆಸಿ ನುಗ್ಗಿತು,
ಪರಿಯಪುಷ್ಪ, ತೆನೆಯತೂಗು, ಹಲವು ಫಲವು ಜಗ್ಗಿತು.

೪

ಭುವಿಯಬಣ್ಣ, ಉದಯಜನ್ಮ, ಧರೆಯ ಬೆಳಗಿ ನೆಲೆಸಿತು ;
ಬಾಹ್ಯರಂಗ, ಜ್ಯೋತಿಮಿನುಗಿ, ಇಳೆಯ ಒಲುಮೆದಳಿಸಿತು ;
ರಾಗದೊಲುಮೆ ತಂತಿಮೀಟೆ,
ಎದೆಯಹರುಷ ತೋರಿ ಈಟೆ ;
ಮೊಗದನಲ್ಮೆ ಪಠಿಸಿದಾಟೆ,
ಕಾಂತಿಶಾಂತಿ, ಪೀಠತೋರಿ, ಪ್ರಭೆಯಹೆಮ್ಮೆ ಹಾಡಿತು,
ಫುಲಭಕ್ತಿ, ಮಯುದನಲ್ಮೆ, ಯಶದಮೇಲ್ಮೆ ತೋಡಿತು.

---

# ಇರಳು - ನೆಳಲು

೧

ಕಾಂತಿಗೆಲುವು
ಶಾಂತಿಚೆಲುವು
ಪಡುವಮುಗಿಲನೇರಿತು.
ತಾರೆಕಿರಣ
ಮಿಸುನಿವರ್ಣ
ಭಾನಬಯಲ ಸೇರಿತು.

೨

ಬಿಂಬಚಲುವು
ತುಂಬಬಯಲು
ಪ್ರಭೆಯ ಹೆಮ್ಮೆ ತೋರಿತು
ಮುಗಿಲತಾರೆ
ಏರಿ ಮೆರೆದು
ರಂಗತೋರಿ ಮೆರೆಯಿತು.

೩

ಪಡುವಮುಗಿಲು
ಮೂಡಬಯಲು
ಮಿಂಚುತಿತ್ತು ಹೊಳಪಲಿ
ನೀಲಮೇಘ
ಮಲೆಯಶಿಖರ
ಜ್ವಲಿಸುತಿತ್ತು ತಿಳಿಯಲಿ.

೪

ತಳಿರ ಕೊನೆಯು
ಫಲದ ಗೊನೆಯು
ತೂಗುತಿತ್ತು ಇರುಳಲಿ
ಸುಳಿವಗಾಳಿ
ಚಿಮ್ಮಿ ನೆಗೆದು
ಹಾರುತಿತ್ತು ನಿಶೆಯಲಿ.

೫

ತಟನಿತೀರ
ವಟದನೇರ
ನಿರವಹಾಯ್ದು ತೀಡಿತು
ಬನವತಡುವೆ
ಮೆರೆದು ಹರಿದು
ಮೌನಸ್ಥಿರವ ಹಾಡಿತು.

೬

ಇರಳು ಬಯಲು
ಛಾಯೆ ನೆಳಲು
ಚಲ್ಲುತಿತ್ತು ಧರೆಯಲಿ
ಕಾಂತಿಗೆಲವು
ಶಾಂತಿ ಚಲುವು
ಮೆರೆಯುತಿತ್ತು ಇಳೆಯಲಿ.

---

# ಗಾಯಕ

ಉದಯಭಾನಿನ ನಡುವೆ,
ಸುಮುದನಾಡಿನ ಕಡೆಗೆ;
ಹೊರಳಿದನು ಒಲುವಿನಲಿ
ಗಾಯಕನು ಕೊನೆಗೆ.

ವೀಣೆಮಿಡಿ ಹಿಡಿದು,
ಮನದಿರಾಗವ ನೆನೆದು;
ತೂರಿದನು ಸಾಗಿದನು
ನಲ್ಮೆಯಲಿ ಮೆರೆದು.

ಮಾರುತನ ಮಿಳಿತದಲಿ,
ಸುಮುದ ಸಾನ್ನಿಧ್ಯದಲಿ;
ಒಮ್ಮೆಯಲಿ ಬೆರೆಸಿದನು
ಗಾಯಕನು ಬನದಿ.

ಮುಗುಳು ಅರಳಿರಲು,
ಮಧುರ ತರುತಿರಲು;
ನೋಡಿದನು ಗಮ್ಯದಲಿ
ಪ್ರಜ್ವಲಿಪ ಚಲುವ.

ವದನದಲಿ ಮೆಲುನಗೆಯು,
ಮನದಿ ಸಂತಸತರಲು;
ಮೀಟಿದನು ವೀಣೆಯನು
ಗಾಯಕನು ನುಡಿಯೆ.

ವನದಿ ಸುಮವಿರಲು,
ಮಧುರ ತರುತಿರಲು;
ಹಾಡಿದನು ತನ್ಮಯದಿ
ರಾಗವನು ಹಿಡಿದು.

ಕೂಡಿ ಭುವನದಲಿ,
ಉದ್ಭವದ ಸೊಬಗಿನಲಿ;
ಪಲ್ಲವದ ಮೇಳದಲಿ
ಕಂಡನಾಬನದಿ.

ಇಂಚರದ ಧ್ವನಿ ಹಾಗೂ,
ಘನತೆ ಹೆಮ್ಮೆಯಸೋಗು;
ಕೂಡುತಿತು ಮೇದಿನಿಯು
ನಡುವಯುವ ಹಿಡಿದು.

---

# ಭಾಗ್ಯೋದಯ

ನದಿನೀರ ನೀರವದಿ
  ಕುಳಿತೊಮ್ಮೆ ನಾನು —
ಮೌನದಲಿ ನೋಡಿದೆನು
  ತಿಳಿನೀಲ ಮುಗಿಲ,

ಸ್ಥಿರವನಿತೆ ನಿಶ್ಚಲದಿ
  ಪಸರಿಸಿರೆ ನೀರದಲಿ
ನಿಟ್ಟಿನಲಿ ನೋಡಿದೆನು
  ಹಚ್ಚನೆಯ ಹಳುವ ;

ಮೂಕದಲಿ ಬೆರೆದಿರಲು
  ಧ್ಯಾನದಲಿ ನಾ - ನಿರಲು
ಹಾರಿತಹ - ಹಾ ಹಕ್ಕಿ !
  ಸ್ವರ್ಣನೀಲದ ಚುಕ್ಕಿ !
ಮೌನವನು ಒಡೆದು
  ಗಗನವನು ನೆಗೆದು.

ಮಿನುಗುತಿತು ಕಿರಣ
  ಚಲಿಸುತಿತು ಸ್ಫುರಣ
ತೇಜದಲಿ ತೋರುತಿತು
  ಎನಗೆ ಹಾದಿ,

ಹರಿಯುತಿತು ನವಜ್ಯೋತಿ
  ಹೃದಯದೇಗುಲದಲ್ಲಿ
ಕಣ್ಬೆಳಕು ಕೂಡುತಿತು
  ಭಾಗ್ಯೋದಯದ ಹಾದಿ.

---

## ಕುಟೀರವಾಸಿ

ಕುಟೀರವಾಸಿ, ಬಂಧುನಿವಾಸಿ !
ಸೇರಿದ ದೇಗುಲ ಹೊತ್ತಿನಲಿ—
ಮಿನಿಗಿತು ಭಾನು, ಹೊಳೆಸಿತು ವಿದ್ಯುತ್ ;
ತಿಮಿರದ ತೀರದ ಕುಟೀರದಲಿ
ಗಗನದ ನೋಟದ ಮಲೆಶಿಖರ
ಥಳಥಳಿಸಿತು ವಿದ್ಯುತ್-ಮುಖರ.

ಕುಟೀರವಾಸಿ, ಬಂಧುನಿವಾಸಿ !
ಮೆರೆದನು ಭವನದ ಸನಿಹದಲಿ—
ಉದರಿತು ಹನಿಹನಿ, ಪ್ರಾಂಗಣದಿ ;
ತಟನೀತೀರದ ಪ್ರಕೃತಿಯಲಿ ;
ಜ್ವಲಿಸಿತು ಹಣತೆಯ ಕಿರುದೀಪ,
ಛಾಯಾರೂಪದ ಮಂಡಿತಭೂಪ.

ಕುಟೀರವಾಸಿ, ಬಂಧುನಿವಾಸಿ !
ನಡೆದನು ಭವನದ ಮಂಡಪದೆಡೆಗೆ—
ಕಿರುದೀವಿಗೆ, ಬೆಳಗಿತು ಪದತಲವ,
ದೇಗುಲ ಜ್ಯೋತಿಯ ಪ್ರಭೆಹೊಳೆಸಿ ;
ಮೊಗದಲಿ ಪ್ರೌಢಿಮೆ, ಹಿರಿದಾಗಿತ್ತು ;
ವಿಲಾಸ ವೈಭವ ತಲೆದೋರಿತ್ತು.

ಕುಟೀರವಾಸಿ, ಬಂಧುನಿವಾಸಿ !
    ಮಣಿದನು ಮೂರ್ತಿಯಗೆದುರಾಗಿ—
ಭಕ್ತಿಪ್ರಭಾವದ, ಹೊಳೆಹರಿಸಿ ;
    ಸೌಮ್ಯದಮೂರ್ತಿ-ಶೈಲಕೀರ್ತಿ
ತೋರಿದ ಮೆಲುನಗೆ ವದನದಲಿ,
    ವರ್ಧಿಸಿ ತಟನಿಯ ಸದನದಲಿ.

ಕುಟೀರವಾಸಿ, ಬಂಧುನಿವಾಸಿ !
    ಎಣಿಸಿದ ಹೊರಡಲು ಅನುವಾಗಿ—
ಮೂಡಲ ಶಿಖರ ತೋರಿತು ವರ್ಣ ;
    ಉದಯದ ಸೊಬಗಿನ ಸ್ವರ್ಣವತೋರಿ,
ಶೈಲಮಿಂಚಿತು ಪ್ರಭಾತದ ನಡುವೆ ;
    ಹೊರಟನು ಗಾಮಿಯು ಭೂಷಣತಡುವೆ.

---

# "ವಾಹಿನಿಗೆ—".*

ಏಸುದಿನ ಮರೆಯಾಗಿ ಎತ್ತ ಸುಳಿದಿದ್ದೆ ವಾಹಿನಿ?
ತೊರೆಯಲಾರದೆ ನಿನ್ನ ಮರುಗುತ್ತಿದ್ದೆನು ನಾನು!
ನೀ! ಎನ್ನ ಜೀವಸ್ಫೂರ್ತಿ! ಒಡನಾಡಿನಾ-ನಿನ್ನ ಕಳೆದುಕೊಂಡೆ!
ವಂಚಿಸಿದೆ ವಾಹಿನಿ! ಪೂರ್ಣಚಂಚಲೆ ನೀನು!
ಮನದೊಳಗೆ ಎಣಿಸಿದ್ದೆ, ನಿನ್ನ ನಾ ಕುರಿತು;
ಸಿರಿಗೂಡಿತರುತಿದ್ದ ನಿನ್ನ ವಾಹಿನಿ ಘನತೆ.
ಭಾವನೆಗೆ ಮೊದಲಲ್ಲಿ ನಡೆವವಳು ನೀ ಎಲ್ಲಿ?
ಮರೆಯಾಗಿ ಸುಳಿದು ಕಾಂತಿಮಾಸಲಿಸಿ.
ಗಾಯಕನ ವಾದನದ ಎಳೆಯೊಂದು ಹರಿದು
ದಿವ್ಯಗಾನಕೆ ತೊಡರ ಅಡಕ ನಿರ್ಮಿಸಿದಂತೆ
ಮನದನುಡಿ ಇಳಿದಿದೆ! ನಿನ್ನ ಬೆಂಬಲವಿರದೆ.
ಉದಿಸಿ ಬಾ! ಒಡನಾಡಿ ಮನದೊಳಗೆ ಸುಳಿದು.
ಗೆಲವುನೊಡನಾಟದಲಿ ಬೆರೆಸಿದ್ದೆ ನೀ-ಎನ್ನಕೂಡಿ,
ಕಾವ್ಯಮಯ ಜಗದಲ್ಲಿ ನಲಿದಿದ್ದೆ ನಾ-ನಿನ್ನ ಗೆಳೆತನದಿ;
ಮರಳಿಮೊದಲಾಗಿ ಮನದೊಳಗೆ ನಲಿದು,
ಉದಿಸಿ ಬಾ! ಒಡನಾಡಿ ಮತ್ತೊಮ್ಮೆ ಸುಳಿದು.
ಕಾವ್ಯವಾಹಿನಿ ನೀನು! ಅನುರಕ್ತ ನಾ-ಮಾತ್ರ
ನಿನ್ನ ತೊರೆಯಲುಬಹುದೆ? ವಾಹಿನಿ!
ಉದಿಸಿ ಬಾ! ಒಡನಾಡಿ ಮನದೊಳಗೆ ಸುಳಿದು.
ನೀ! ಎನ್ನ ಜೀವಸ್ಫೂರ್ತಿ! ಅಮೃತಚೇತನವಿತ್ತು
ಸುಳಿದು ಅಲೆಯಾಗಿ ವಲಿಸಿ ಹುಮ್ಮಸತೋರಿ
ಉದಿಸಿ ಬಾ! ಒಡನಾಡಿ ಮತ್ತೊಮ್ಮೆ ಸುಳಿದು.

---

* ಕವಿತಾಸ್ಫೂರ್ತಿ.

# ಛಾಯಾ !

ಸುಳಿದಳು, ಸುಳಿದಳು, ಛಾಯಾ !
ಮರೆದಳು, ಮರೆದಳು, ಮಾಯಾ !

ಸರಸೀತೀರದ
ಮರದಾನೆರಳಲಿ
ಸುಳಿವಾಗಾಳಿಯು
ತೆರೆಯಾಮರೆಯಲಿ
ಸುಳಿದಳು, ಸುಳಿದಳು, ಛಾಯಾ !
ಮರೆದಳು, ಮರೆದಳು, ಮಾಯಾ !

ಬನದಾಸಿರಿಯಲಿ
ಬಯಲಲಿ ಹಾಡುತ
ಸೊಗಸಾಸೊಂಪಲಿ
ಕೂಡುತ ನಲಿಯುತ
ಸುಳಿದಳು, ಸುಳಿದಳು, ಛಾಯಾ !
ಮರೆದಳು, ಮರೆದಳು, ಮಾಯಾ !

ಪಡುವಾಕಾಂತಿಯ
ಬೆಳಕಾಕಳೆಯುತ
ತೆಂಕಲಗಾಳಿಯ
ಗೆಲುವಾತೋರುತ
ಸುಳಿದಳು, ಸುಳಿದಳು, ಛಾಯಾ !
ಮರೆದಳು, ಮರೆದಳು, ಮಾಯಾ !

ಗಗನಾಗುರಿಯಲಿ
ಸೇರೀಸಾರುತ
ಅಂಥಚಂದವ
ಬೀರೀಸರಿಯುತ
ಸುಳಿದಳು, ಸುಳಿದಳು, ಛಾಯಾ !
ಮರೆದಳು, ಮರೆದಳು, ಮಾಯಾ !

ಮುಗಿಲಾಮಾಯೆಯ
ನೇರೀಹಾರುತ
ಕರಿಯಾಮೋಡವ
ಕುರಿತೂಹಾಡುತ
ಸುಳಿದಳು, ಸುಳಿದಳು, ಛಾಯಾ !
ಮರೆದಳು, ಮರೆದಳು, ಮಾಯಾ !

ಮಾಯಾಮುಗಿಲಲಿ
ಚಲುವಾಚುಕ್ಕಿಯ
ಬಾನಾಬೆಳಕಲಿ
ಬಿಂಬವತೋರುತ
ಸುಳಿದಳು, ಸುಳಿದಳು, ಛಾಯಾ !
ಮರೆದಳು, ಮರೆದಳು, ಮಾಯಾ !

ಗಿರಿಯಾಗಗನದಿ
ಹಾರುತ ತೂರುತ
ಭುವಿಯಾಬಯಲಲಿ
ಹಾಡುತ ಹಿಗ್ಗುತ
ಸುಳಿದಳು, ಸುಳಿದಳು, ಛಾಯಾ !
ಮರೆದಳು, ಮರೆದಳು, ಮಾಯಾ !

ಬಿಂಬಾಕ್ಷೇತ್ರದಿ
ಸಲಿಲಾಶೀತದಿ
ಮುಗಿಲಾಮುಯುದಲಿ
ಭುವಿಯಾಬಯಲಲಿ
ಸುಳಿದಳು, ಸುಳಿದಳು, ಛಾಯಾ !
ಮರೆದಳು, ಮರೆದಳು, ಮಾಯಾ !

## ಜೀವನ ಝರಿ

ಜೀವನ ಝರಿಯಲ್ಲಿ ಜಾರುತಿಹೆ ನಾನು
ಭಾವರಸ ಸುಪ್ತಿಯಲಿ ಸಂದು,
ಮನಸಿಜನ ಮರೆಯಲ್ಲಿ, ಸುಳಿಗಾಳಿ ತೆರೆಯಲ್ಲಿ
ತೂರುತಿಹೆ ಸಾದರದ ಸವಿಯನೆಣಿಸಿ,
ಪ್ರೇಮಮಯ ಪಾವನದಿ ಮೂಡುವಲಿ ಭಾನು,
ಬಾಗಿರುವೆ ಮೈದೋರಿ ಬಕುತಿ ತೋರಿ,
ಅಭ್ಯುದಯ ಸಂಪತ್ತು, ಹುಮ್ಮಸದ ಹುರುಪಲ್ಲಿ,
ಹೂಡಿರುವೆ ಲಹರಿಯಲಿ ನಲ್ಮೆಯಿಂದ;
ವೇಗದಲಿ ಸಾಗಿರುವೆ, ಭಾವನೆಯ ಭುವಿಯಲ್ಲಿ
ಧ್ಯೇಯಮಯ ದೂರ ನೆನಸಿ,
ಮೇಘಮಯ ಮುಗಿಲಲ್ಲಿ ಮಿನುಗುತಿಹ ಚುಕ್ಕಿ,
ರಾಳದಲಿ ರಶ್ಮಿಯಲಿ ಬಳಗುತಿರೆ ನಕ್ಕಿ;
ಹುಮ್ಮಸದ ಹುರುಪಲ್ಲಿ ಹಾರುವಲಿ ನಾನು
ಕೃಪೆತೋರಿ ಜ್ಯೋತಿಸಿತು ಮಬ್ಬುಮುಕ್ಕಿ.

---

# ಅಂದು ನೀರವರಾತ್ರಿ!

ಅಂದು ನೀರವರಾತ್ರಿ!
ಬೆಳಗಿದಳು ಚಲುಧಾತ್ರಿ!
ಸುತ್ತುಮುತ್ತಲು ಸರಿದು,
ಎತ್ತಲೆತ್ತಲು ಹರಿದು;
ಮುಸುಕಿನಲಿ ನುಸುಳಿ ಮೆರೆದು!

ಗಗನದಲಿ ಬಿಳಿಮುಗಿಲು,
ಬಿಂಬ ಬಯಲಲಿ ನಗಲು;
ನೀರವರಾತ್ರಿಯಲಿ,
ಸೊಗದ ಶಾಂತಿಯಲಿ;
ಧಾತ್ರಿ ಮೆರೆದಳು ನಸುಕಿನಲ್ಲಿ!

ತಟನಿವಟದಲಿ ನಡುವೆ,
ಬಿಂಬ ಬಯಲಲಿ ತಡುವೆ;
ನಸುಗಾಳಿ ಸುಳಿದು ಮೆರೆಯೆ,
ಪ್ರಬಲನೊಮ್ಮೆಯೆ ಮಿಳಿಯೆ;
ಮಿನಿಗಿದಳು ಮೌನದಲಿ ಕೆಳೆಯೆ!

ತಿಳಿಯ ಮುಗಿಲಲಿ ತಾರೆ!
ಸುತ್ತುಮುತ್ತಿರೆ ಪಾರೆ!
ರಜನಿ ಮೆರೆದಳು ಅಂದು,
ಮೌನನಿಧಿಯಲಿ ಮಿಂದು;
ಮೇದಿನಿಯ ನೇಸರದಿ ಅಂದು!

ಅಂದು ನೀರವರಾತ್ರಿ!
ಬೆಳಗಿದಳು ಚಲುಧಾತ್ರಿ!
ಸುತ್ತುಮುತ್ತಲು ಸರಿದು,
ಎತ್ತಲೆತ್ತಲು ಹರಿದು;
ಮುಸುಕಿನಲಿ ನುಸುಳಿ ಮೆರೆದು!

---

# ವಿಕ್ರಮ

ಬಂತು, ಬಂತು, ವಿಕ್ರಮ!
ತಂತು, ತಂತು, ಸಂಭ್ರಮ!

೧

ಕೊನೆಯ ಹಸುರ ಜತೆಯಸೇರಿ
ಒಲುಮೆ ಮಿಲನ ಗೆರೆಯಕೂಡಿ
ಬೆಳೆಯಬಾಳ, ಬಣ್ಣತೋರಿ
ಬಂತು, ಬಂತು, ವಿಕ್ರಮ!
ತಂತು, ತಂತು, ಸಂಭ್ರಮ!

೨

ಕಿರಿಯ ಎಳೆಯ ಬಾಲರೆಡೆ
ಕೆಳೆಯ ಗೆಳತಿ ಮಿಳಿತದೆಡೆ
ಹೊಸದುಹಾಡಿ, ಹರುಷಗೂಡಿ
ಬಂತು, ಬಂತು, ವಿಕ್ರಮ!
ತಂತು, ತಂತು, ಸಂಭ್ರಮ!

೩

ಹಬ್ಬದುಡಿಗೆ ಜಗ್ಗಿನಡಿಯೆ
ಮನೆಯ ಭಾಗ್ಯ ಹಿಗ್ಗಿ ಮೆರೆಯೆ
ಮೆರಗ ಸವಿಯ, ಮಧುರ ಬೀರಿ
ಬಂತು, ಬಂತು, ವಿಕ್ರಮ!
ತಂತು, ತಂತು, ಸಂಭ್ರಮ!

೪

ಸವಿಯಕಾಲ ಕಳೆಯಕಿತ್ತು
ಹರೆಯಕಾಲ ಹದಕೆತೆತ್ತು
ನಗೆಯಹೆಮ್ಮೆ, ನೊಗವಹೂಡಿ
ಬಂತು, ಬಂತು, ವಿಕ್ರಮ!
ತಂತು, ತಂತು, ಸಂಭ್ರಮ!

೫

ಉದಯಭಾನುಮೂಡೆ
ಸುಳಿವಗಾಳಿತೀಡೆ
ಜೀವಕುಲದ, ಜಾಲಹಾಡಿ
ಬಂತು, ಬಂತು, ವಿಕ್ರಮ!
ತಂತು, ತಂತು, ಸಂಭ್ರಮ!

---

# ಆನಂದವನ

೧

ನಸುಗಾಳಿ ಮೆಲ್ಲನೆ, ಸುಳಿಸುಳಿದು ತೆಳ್ಳನೆ,
ತೀಡುತಿತು ಮೋದದಲಿ ಆನಂದವನದಿ ;
ಮುಗುಳಿನ ಸಲೆಕಂಪು, ಕುಕಿಲಗಳ ಕೊರಲಿಂಪು
ಮನವನ್ನೆ ಮಿಡಿದಿತ್ತು ಸಂತಸದಿ ಅಂದು.

೨

ಝರಿನೀರು ತಿಳಿಹರಿದು, ಚಿಗಿಚಿಗಿದು ನಡೆನೆಗೆದು,
ಬನವನ್ನು, ಮನವನ್ನು ಏಕದಲಿ ಬೆರೆದು ;
ಅನಿಲದಲಿ ಮೈಮರೆದು ಮೇಘದಲಿ ಹೊರಳಿಳಿದು
ಮೂಡಿದನು ತೋರಿದನು ಚಂದಿರನು ಅಂದು.

೩

ಪಡುವಿನ ಚಲುಕಾಂತಿ, ಚಂದಿರನ ಮೊಗಶಾಂತಿ,
ಕೂಡುತಿತು ಮೇದಿನಿಯ ಆನಂದವನದಿ ;
ಕಿರಣಗಳು ಸ್ವರ್ಣದಲಿ ಜ್ವಲಿಸುತಿತು ಹಿರಿಮೆಯಲಿ
ಅಲರಲ್ಲಿ ಮುಗುಳಲ್ಲಿ ಸವಿಯನ್ನು ತುಂಬಿ.

೪

ತೆಳ್ಳನೆಯ ತಂಗಾಳಿ, ತುಂಬುತಿರೆ ಕಂಗಳನು,
ತನ್ಮಯದಿ ಮೈಮರೆದೆ ಆನಂದವನದಿ ;
ಮಧುಭಾವ ಮೂಡಿರಲು, ಒರತೆಯೋ ತೆರವಿರಲು
ನೋಡಿದೆನು ಸಗ್ಗವನು ಆನಂದವನದಿ.

೫

ನಿಶ್ಶಬ್ಧವನದಲ್ಲಿ, ನಿಸರ್ಗಭವನದಲ್ಲಿ,
ನಿಶ್ಶಬ್ಧವಸಿತೆಯಾ-ನಂದವನದಲ್ಲಿ —
ನೋಡಿದೆನು ದೇಗುಲದಿ ಮಾಲಿಸಿಯ ಮೂರ್ತಿ
ಕೂಡಿಯೇ ರಾಗದಲಿ ಆನಂತಸ್ಫೂರ್ತಿ.

---

# ವಸಂತ

ಹೂಗೊಂಚಲ, ಕೊನೆಮಿಂಚಲು
ಮರದೆಲೆಗಳು, ಸಿವಿರೇಳಲು
ಬಂದುದು ವಸಂತ
ತಂದುದು ಸಿರಿಸಂತಸ
ಹಳಹಚ್ಚಲು, ಹಸುರಾಗಲು
ಹೊಲಸುತ್ತಲು, ಸವಿಕಾಣಲು
ಮೆರೆದುದು ವಸಂತ
ತಂದುದು ಸಿರಿಸಂತಸ.

ಗಿಡಮರದಲಿ, ಕುಕಿಲೇರಲು
ಹೂಮುಗುಳಲಿ, ಭ್ರಮಹಾರಲು
ಬಂದುದು ವಸಂತ
ಸಂದುದು ಸಿರಿಸಂತಸ
ಮರದಾಸರೆ, ಚಲುತೋರಲು
ಫಲಭಾರವು, ಕಂಗೊಳಿಸಲು
ಮೆರೆದುದು ವಸಂತ
ಸಂದುದು ಸಿರಿಸಂತಸ.

ರವಿಕಿರಣದಿ, ವನಬೆಳಗಲು
ಸುಮಕೋಮಲ, ಸವಿಪಾಡಲು
ಬಂದುದು ವಸಂತ
ಹೊಳೆದುದು ಸಮಸಂತಸ
ಹೊಲಹಸುರಲಿ, ತೆನೆತೂಗುತ
ಪರಿಪಕ್ವದಿ, ಬಿರಿದೊಡೆಯುತ
ಮೆರೆದುದು ವಸಂತ
ಹೊಳೆದುದು ಸಮಸಂತಸ.

---

# ಮೆರೆಯುವ ಮೃದುಮಾಯಾ!

ನದಿನೇರದಿ ಸರಿವಂದದಿ
ವನಸಲೆಯಲಿ ಮುಗುಳಂದದಿ
ಗಿರಿಗಗನದಿ ಗೆಲುವಂದದಿ
ಭುವಿಬಯಲಲಿ ಬಲುನಯದಲಿ
ಮೆರೆಯುವ ಮೃದುಮಾಯಾ!
ಬೆರೆಸಿಹೆ ಸವಿಛಾಯಾ!

ಪಡುಬಾನಲಿ ಗೆಲುಹರುಷದಿ
ಖಗಕುಕಿಲದ ಸವಿರಾಗದಿ
ಝರಿಜಾಣ್ಮೆಯ ತಡಿಎಡೆಯಲಿ
ಹೊಲಹಸುರಿನ ಸರಿಜತೆಯಲಿ
ಮೆರೆಯುವ ಮೃದುಮಾಯಾ!
ಬೆರೆಸಿಹೆ ಸವಿಛಾಯಾ!

ಪುರನೆರಳಿನ ಸುಳಿಗೆಲುವಲಿ
ಬನಸೊಗಸಿನ ಸೊಗಸೊಂಪಲಿ
ರವಿರೇಣಿನ ದೆಸೆಎಸೆಯಲಿ
ಚೆಲುಬಣ್ಣದ ತಿಳಿಹೊಳೆಯಲಿ
ಮೆರೆಯುವ ಮೃದುಮಾಯಾ!
ಬೆರೆಸಿಹೆ ಸವಿಛಾಯಾ!

ಅಣುಚುಕ್ಕಿಯ ಮಿರುಮೆರುಗಲಿ
ಮುಡುಮುಬ್ಬಿನ ಎಡೆಪಥದಲಿ
ನಿಡುರಾತ್ರಿಯ ಕರಿಮೇಘದಿ
ಸರಿನೀರವ ಸೆಳೆದೆಳೆತದಿ
ಮೆರೆಯುವ ಮೃದುಮಾಯಾ!
ಬೆರೆಸಿಹೆ ಸವಿಛಾಯಾ!

---

# ಮುಚ್ಚಂಜೆ

೧

ಸುಳಿಗಾಳಿ ತೀಡುತಿತ್ತು, ಮೆಲುನಗೆಯು ಮೂಡುತಿತ್ತು
ಮೂಡಲಲಿ ವೈಭವವು ನಲಿದಾಡುತಿತ್ತು;
ಸೀರುಂಬೆ ಸೀರುತಿತ್ತು, ಜತೆಗೂಡಿ ಜಾರುತಿತ್ತು
ವೈಭವದಿ ಸೊಬಗಿನಲಿ ಆಡುತಿತ್ತು;
ನಿಶೆಜಾರಿ ಚಲಿಸಿತ್ತು, ಉಷೆಬೀರಿ ನಲಿದಿತ್ತು
ತಿಳಿಹೊಳೆಯ ಬಾಸಿನಲಿದೋರಿತ್ತು.

೨

ಆರುತಿತು ಚುಕ್ಕಿಗಳು, ಹಾರುತಿತು ಹಕ್ಕಿಗಳು
ಮೋದದಲಿ ಏರುತಿತು ಮುಗಿಲು;
ಸಿರವನಿತೆ ಜಾರಿದಳು, ಸಿರಿವನಿತೆ ಹಾರಿದಳು
ಶಾಂತಿಯಲಿ ರಂಜಿಸುತ ಹಗಲು;
ಮಾಯೆ ತೂರಿದಳು, ಛಾಯೆ ಸಾರಿದಳು
ಉನ್ನತದಿ ಪ್ರತಿಭೆಯನು ನೆಡಲು.

೩

ತಿಳಿಹೊಳೆಯ ಬಾಸಿನಲಿ, ಮಿಸುನಿ ಹೊಳೆ ಕಿರಣದಲಿ
ಮೇದಿನಿಯು ಮಿನುಗುತಿತು ಸ್ವರ್ಣದಲಿ;
ಮೇಳೆಯಲಿ ತೇಲಿನಲಿ, ಮುಗುಳು ಲಾಲಿಯಲಿ
ತೂಗುತಿತು ಕುಡಿಯಲ್ಲಿ ಬಾಳಿ;
ಸಕಲಸಂಮಿಳತದಲಿ, ಸೌಹಾರ್ದಸಂಮೇಲನದಿ
ಮುಚ್ಚಂಜೆ ಕೂಡಿತ್ತು ಭುವಿಯಲ್ಲಿ.

---

# ಬಾನ್ದೇವಿಯ ಕೈ ಅಲುಕ

ನಸುಗಾಳಿ ಸುಳಿದು ಗಗನದಲಿ ನೆಗೆದು,
ಹೊಸ ನಗೆಯು ಸೆಳೆದಿತ್ತು ರಜನಿಯಲಿ ಮಿಂದು;
ದೂರದಲಿ ತಟನಿಯಲಿ ಮೂಕದಲಿ ಹಾಯ್ದು,
ಬೆರೆದಿತ್ತು ಇಳೆಯಲ್ಲಿ ಒಮ್ಮೆಯಲೆ ಉಳಿದು;
ಯೋಜನದ ಗಗನದಲಿ ಕವಿದಿತ್ತು ಮುಸುಕು,
ಮಂಡಲವನೆಲ್ಲವನು ಹುದುಗಿಟ್ಟು ನುಗಿದು;
ಮಲೆಗಳಲಿ ನೆಲೆಗಳಲಿ ನೀರವದ ಸೆರಗು,
ಜಾರಿತ್ತು ಮಾಯದಲಿ ನಿಶಿತದಲಿ ನಲಿದು.
ಝರಿನೀರು ಹೊಳೆಯಾಗಿ ಹರಿದಿತ್ತು ತಪ್ಪಲಲಿ,
ಹಚ್ಚನೆಯ ಹಳುವಿನಲಿ ತೆನೆಹಸುರ ಜತೆಯಾಗಿ.

ಪಡುವಣದದೆಸೆಎಸೆಯೆ ನಸುಗಾಳಿಭರವು,
ಹೊಕ್ಕಿದುದು ಆದ್ಯಂತ ಮುಬ್ಬನೆಯ ಕೊನೆಯು
ಗಗನದಲಿ ಘೋರ್ಗರೆದು ಗುಡುಗಿದವು ಸಿಡಿಲುಗಳು
ಭರದಲ್ಲಿ ಛಲದಲ್ಲಿ ಎದುರಾಳಿಗೆದುರಾಗಿ.

ಬಾನ್ದೇವಿ ಕೈ ಅಲುಕ ಗಜರಿದವು ಝಳಪಿ
ಕೋಲ್ಮಿಂಚು ನಗೆಮಿಂಚು ಹೊರಸೂಸಿ ಸೆಳೆಸಿ
ಗುಡುಗುಗಳು ಸಿಡಿಲುಗಳು ಅಬ್ಬರದಿ ಸಿಡಿದು
ಹನಿಧಾರೆ ಒರೆಯಾಗಿ ಉದರಿದವು ಭರದಿ.

ಹಳುವಿನಲಿ ತೆನೆಹಸುರು ತೋಯುತಲಿ ನಲಿಯುತಲಿ
ಹೊಸನೀರ ಹನಿಯಿಂದ ತೂಗುತಲಿ ಬಾಗುತಲಿ
ಮನ್ನಣೆಯನರ್ಪಿಸಲು ನರ್ತನದಿ ಬಳುಕಿ
ಬಾಗಿದವು ಹೆಮ್ಮೆಯಲಿ ಬಾನ್ದೇವಿಗೆದುರಾಗಿ.

---

# ವನಜ್ಯೋತ್ಸ್ನೆ

ನಿಬಿಡವನದಲಿ ಪಟ್ಟಮುದ್ರೆಯನೊತ್ತಿ,
ಮಿಳಿದಿರುವೆ ರಂಗದಲಿ ವನಜ್ಯೋತ್ಸ್ನೆ!
ನಿಲುವಾಭರಣ ಚಲುವಸುಂದರಿಪಾರೆ!
ಪ್ರಕೃತಿತೋರಣದಲ್ಲಿ ಕೂಡಿರುವೆ, ವೈಯ್ಯಾರವನಿತೆ!
ಕಲಕಲನಿನಾದ ಚಲಚಲನೆ ವೈಖರಿಯ
ತೋರಿರುವೆ, ಸೃಷ್ಟಿಚೇತನದಲ್ಲಿ ; ಸಂಭೂತೆ!
ನಸುಗೆಂಪುಬಣ್ಣ ತೊಡಿಗೆಯನುತೋರಿ.
ನಿಟ್ಟಡವಿ ದಟ್ಟವನದಿ ಮೆರೆದಿರುವೆ ಕಲ್ಯಾಣಿ!

ಪಾವನನಯನೆ ವನಜ್ಯೋತ್ಸ್ನೆ ಪರಿಪೂರ್ಣೆ!
  ಪ್ರಕೃತಿ ಉಸುರಿನಲಿ ಭಾವಸೊಬಗನುತೋರಿ
ಕಾವ್ಯಮಯ ಜಗದಿ ನೀ ವಿಹಾರಿಣಿ ಅತುಳೆ!
  ಹೃದಯದಲಿ ಹೊಮ್ಮುತ್ತಿದೆ ಉಕ್ಕೇರಿ ಭಾವನೆ
ಹರಿದು ಹೊನಲಾಗಿ ಹರಿಯುತಿದೆ ಮಾಯೆ!
  ವನಿತೆ ನಿನ್ನೆಡೆಯ ಸೇರಲು, ತವಕದಿಂ ಸ್ವಪ್ನೆ!
ಕರತಲ, ಕಮಲ, ಕಮನೀಯ ಕಲಾನಿಪುಣೆ
  ವಾಣಿ! ವಾಗ್ದೇವಿ! ಕಾವ್ಯಸರಸಿಯು ನೀನು
ಅಪಾರತ್ವದಲ್ಲಿ, ನಿರ್ಮಾಣ ಸುರಭಿಯಲಿ
  ನದ, ನಭ, ನಟನೆ; ತತ್ಸಮಸ್ತದಲಿ
ದರ್ಶನನೀಡಿ ತಳತಳಿಸು ಮಹತಾಯೆ!
  ಅತುಳ ತಾಪಸಕುವರಿ ವಿಖ್ಯಾತಮಾನ್ಯೆ!

---

# ಕ್ರೀಡಾವನ

ರಂಗಸ್ಥಳ, ತಾರಾಪಥ
ಲೀಲಾಮಯ ಜಗವು
ತೇಜೋಬಲ, ಸ್ಫುರಣದ್ರವ
ಕವಿ ಕ್ರೀಡಾವನವು.

ಗಾಯನ ವೀಣಾವಾತನ
ಸಾಧನವಾದನೆಯು
ಆರಾಧನೆ, ರಸಸ್ವಾದನೆ
ವೈಣಿಕನಾದೋಪಾಸನವು.

ಮೋಹಿನಿ, ನೃತ್ಯಪರಾಯಿಣಿ
ಕಂಕಣ ಝಂಕೃತಿಯು
ಮುಖಭಂಗಿಯ ಭಾವತರಂಗವು
ರೂಪಾರಾಧನಚೇತನವು.

ಬಾನ್‌ಬಯಲಿನ, ತಾಣ್‌ನೆಳಲಿನ
ಪಾರಾತ್ಪರ ಜೋಡಣೆಯು
ವಿಹಾರಿಯ ಕ್ರೀಡಾಪರಿ
ಸೊಬಗಿನಖನಿ ಭೂಷಣವು.

ಕಲೆಗಾರರ ಇಡಿಜೀವನ
ಉದ್ಭಾವನ ಕ್ರೀಡನೆಯು
ಇತಿಹಾಸದಿ ಉಪಾಸನೆ
ಲೀಲಾಮೋದನವು.

---

# ಓ! ಪುಟ್ಟಹಕ್ಕಿ!

೧

ನಿಸರ್ಗವನದಲಿ, ಕಂಗೊಳಿವ ಕಾನನದಿ
ಕುಳಿತು ಕೂಗುವ ನೀ! ಪುಟ್ಟಹಕ್ಕಿ!
ಪ್ರೇಮಮಯ ಪತಿತಪಾವನವ ನೀ! ಹಾಡು
ಓ! ಪುಟ್ಟಹಕ್ಕಿ!
ಓ! ನಿನ್ನ ಉತ್ತೇಜ ಉತ್ಸಾಹವನು ಹಾಡಿ!
ಓ! ನಿನ್ನ ಗಾನಚೆಲುಮೆಯನು ತೋಡಿ!
ಪತಿತಪಾವನವ ನೀ! ಹಾಡು
ಓ! ಪುಟ್ಟಹಕ್ಕಿ!

೨

ಸುಂದರ ವನದಲಿ, ಕಣಿವೆಕಂದರ ಛಾಯೆಯಲಿ
ಮಧುರಮರಗಿಣಿ ನೀ! ಪುಟ್ಟಹಕ್ಕಿ!
ವನದಲಿಹರಿವ ತಣಿವತೊರೆಯು ನೀ! ಹಾಡು
ಓ! ಪುಟ್ಟಹಕ್ಕಿ!
ಓ! ನಿನ್ನ ಮಧುರ ಸವಿಗಾನವನು ಬೆರಸಿ!
ಓ! ನಿನ್ನ ಒಲುಮೆಯನು ಅದರಲಿರಿಸಿ!
ತಣಿವತೊರೆಯು ನೀ! ಹಾಡು
ಓ! ಪುಟ್ಟಹಕ್ಕಿ!

೩

ವನದವೇದಿಯಲಿ, ವೈಭವವಿಶಾಲದಲಿ
ನೆಲೆಸಿನಲಿಯುವ ನೀ! ಪುಟ್ಟಹಕ್ಕಿ!
ಸವಿಸಲ್ಲಾಪ ಸಂಪಿಗೆಯ ನೀ! ಹಾಡು
ಓ! ಪುಟ್ಟಹಕ್ಕಿ!
ಓ! ನಿನ್ನ ರಾಗದೂಟೆಯನು ಹರಿಸಿ!
ಓ! ನಿನ್ನ ವಿಶಾಲವೈಭವವ ವಲಿಸಿ!
ಸಲ್ಲಾಪಸಂಪಿಗೆಯ ನೀ! ಹಾಡು
ಓ! ಪುಟ್ಟಹಕ್ಕಿ!

೪

ಎಳೆಹಸುರಿನಲಿ, ಮೃದುಮಮತೆಯಲಿ
ಸೇರಿಸಾಗುವ ನೀ! ಪುಟ್ಟಹಕ್ಕಿ!
ನಲುವುನಾಟ್ಯದ ಹರಿಣನನು ನೀ! ಹಾಡು
ಓ! ಪುಟ್ಟಹಕ್ಕಿ!
ಓ! ನಿನ್ನ ದೀರ್ಘಘಾಟೆಯನು ಎಳೆದು!
ಓ! ನಿನ್ನ ಮಾಗಧಮಹಿಮೆಯನು ಸೆಳೆದು!
ನಾಟ್ಯದ ಹರಿಣನನು ನೀ! ಹಾಡು
ಓ! ಪುಟ್ಟಹಕ್ಕಿ!

೫

ಸ್ಥಾಯಿನಿಲುವಿಕೆಯಲ್ಲಿ, ಕೌಶಲ್ಯಜಾಜ್ವಲ್ಯದಲಿ
ಉಲಿಉಲಿವ ನೀ! ಪುಟ್ಟಹಕ್ಕಿ!
ನೇಮನಿಸರ್ಗದ ಮಹಿಮೆ ನೀ! ಹಾಡು
ಓ! ಪುಟ್ಟಹಕ್ಕಿ!
ಓ! ನಿನ್ನ ಕೋಮಲಕಂಠದಿಂ ಕೋರಿ!
ಓ! ನಿನ್ನ ಮೃದುಮಮತೆಯನು ತೋರಿ!
ನಿಸರ್ಗದಮಹಿಮೆ ನೀ! ಹಾಡು
ಓ! ಪುಟ್ಟಹಕ್ಕಿ!

[ವಿಖ್ಯಾತ ನರ್ತನಗಾರರಾದ ಶ್ರೀ॥ ಸೋಹನ್‌ಲಾಲ್‌ರವರ ನೃತ್ಯಭಂಗಿಯೊಂದರಿಂದ ರೂಪುಗೊಳಿಸಿದೆ.
ವಿಷಯಸಂಗ್ರಹವು ಈ ರೀತಿ: ಮಹಾಶಿವರಾತ್ರಿಯ ಶುಭದಿನದಲ್ಲಿ ಭಕ್ತರು ಶಿವನ ಪೂಜೆಯ ಸಲುವಾಗಿ ಮಂದಿರದಲ್ಲಿ ಬಂದು ಸೇರುವರು. ವಿವಿಧ ನೈವೇದ್ಯ ಫಲ ಮತ್ತು ಮಧುವನ್ನು ಶಂಕರನ ತೃಪ್ತಿಗಾಗಿ ತಂದು ಅರ್ಪಿಸುವರು. ಶಿವನ ಲೀಲಾಸ್ತೋತ್ರದಲ್ಲಿ ಮುಳುಗಿದವರಾಗಿ, ತಮಟೆ ಮದ್ದಲೆಗಳ ಸದ್ದಿನಲ್ಲಿ ತಲ್ಲೀನರಾಗಿ, ಲೀಲಾತಾಲದಿಂದ ನರ್ತಿಸಿ, ಶಿವನೂ ಅವರೊಡನೆ ಅವನು ಸೃಷ್ಟಿಸಿದ ಎಲ್ಲಾ ವಸ್ತುಗಳ ಜೊತೆಯೊಂದಿಗೆ ತಮ್ಮೊಡನೆ ನರ್ತಿಸಿದಹಾಗೆ ಭಾವಿಸಿ ಮೆರೆಯುವರು.]

# ಈ ರಾತ್ರಿ - ಇಂದು ಮಹಶಿವರಾತ್ರಿ!

೧

ಸೊಡರಬೆಳಕಿನ ಹೊಳೆಯು
ಮಂದಿರದಿ ಹರಿಯುವುದು—
ಪರಶಿವನ ಪೂಜಿಸಲು
ಸೇರಿಹರು ಕಿಂಕರರು,
ಭಕ್ತಭಾವಿಕರು ಕಲಸುವರು ಈ ರಾತ್ರಿ!
ಇಂದು ಮಹಶಿವರಾತ್ರಿ!

೨

ಮಂದಿರದಿ ಬೆಳಗುವರು—
ಹೆಂಗೆಳೆಯರಿಂದು
ಹರನಪೂಜೆಗೆ, ಅವರು
ತಂದಿಹರು ಮಧುವು,
ರುಂಡಮಾಲಿಗೆ ಅರ್ಪಿಸಲು ಈ ರಾತ್ರಿ!
ಇಂದು ಮಹಶಿವರಾತ್ರಿ!



4

೩

ಈ, ಶುಭದಿವಸ ರಾತ್ರಿ !
ಮೆರೆಯುವಳು ಧಾತ್ರಿ !
ಶಂಭುವನು ಸ್ತುತಿಸುವಳು
ಇರಳುದೀವಿಗೆ ಎದುರು
ಒಲುಮೆ ಮಿಲನದಿ ಚೆಲುವೆ—ಈ ರಾತ್ರಿ !
ಇಂದು ಮಹಶಿವರಾತ್ರಿ !

೪

ತಮಟೆ ಮದ್ದಲಸದ್ದು
ಮಂದಿರದಿ ಕೇಳುವುದು—
ಶಂಕರನ ಸ್ತುತಿಸುವರು
ಭಕ್ತರರು, ಭಾವಿಕರು ;
ರೌದ್ರಮುಖಿ ಲಾಸ್ಯದಲಿ ಮುಳುಗುವನು ಈ ರಾತ್ರಿ!
ಇಂದು ಮಹಶಿವರಾತ್ರಿ !

೫

ಶಿವನ ಲೀಲೆಯ ಭವನ
ಮುಳುಗುವುದು ಲಾಸ್ಯದಲಿ—
ನೃತ್ಯವರ್ತನ ಕ್ರೀಡೆ
ಕಾಣುವುದು ಮಂಡಲದಿ,
ಹರನ ಸುತ್ತುವರವರು ತನ್ಮಯದಿ ಈ ರಾತ್ರಿ !
ಇಂದು ಮಹಶಿವರಾತ್ರಿ !

೬

ಜಗದಿ ಕಾಣುವದಿಂದು
ಸೋಜಿಗದ ವಿಸ್ತರಣ—
ಇಳೆಯಲ್ಲಿ, ಮುಗಿಲಿನಲಿ
ದೆಸೆ ಎಸೆಯ ದಿಕ್ಕಿನಲಿ
ನೃತ್ಯದರ್ಶನಕಿರಣ ಮಿರುಗುವುದು ಈ ರಾತ್ರಿ !
ಇಂದು ಮಹಶಿವರಾತ್ರಿ !

# ಕಿರುತಾರೆ !

ಮಿಂಚಿನ ಗೊಂಚಲು ಸುತ್ತಲು ಎತ್ತಲಿ,
ಸುಳಿಸುಳಿಗಾಳಿಯು ನಡುಎಡೆಪಥದಲಿ
ಕಪ್ಪನೆಮೋಡದ ಮುಬ್ಬಿನದೆಸೆಯಲಿ
ಮಿನಿಗಿತು, ಮೆರೆಗಿತು, ಕಿರುತಾರೆ!
ಪಡುವಲನಾಡಿನ ಮಲೆಯುಸ್ಸೋಮದಿ,
ಮೂಡಲತಗ್ಗಿನ ಹಚ್ಚನೆಹಳುವಲಿ
ನಾಡಿನ ತೀರದ ಸುಳಿವಿನ ಗೆಲುವಲಿ
ದೋರಿತು, ಮೆರೆಯಿತು, ಮುಗಿಲೇರಿ
ಹಾಡುವ ಹಕ್ಕಿಯು ನೇರದಬಯಲಲಿ
ಗೆಲುವಿನ ಮೆಲುವಿನ ಸಂಪಿಗೆಕಂಪಲಿ
ಬೆರೆಸಿತು, ಮೂಡಿತು, ಕಿರುತಾರೆ!
ವಿರಹೀಹೃದಯದ ತಳಮಳತೌರಲಿ
ಭುವಿಯಾಭಾವನೆ ಬಯಲಿನ ನೆಲೆಯಲಿ
ನೆಟ್ಟಿತು, ನೆಟ್ಟಿತು, ನೆರೆಶಾಂತಿ.

---

# ದೀವಿಗೆ

ಇರುಳಿನಲಿ ದೀವಿಗೆ—
ಸಿರಿನಾಡತೇರಿಗೆ
ಮುದುಭಾವ ಹಿರಿಮೆಯನು
ನಿಧಿಯಾಗಿ ಬೆಸೆಸಿತು.
ಪ್ರಬುದ್ಧಮಾರ್ಗದಲಿ—
ನಿಬ್ಬಣದ ಜತೆಯಾಗಿ
ಉಜ್ವಲದ ಕಾಂತಿಯನು
ಕೆಚ್ಚಿನಲಿ ತಂದಿತು.

ದೀವಿಗೆಯ ಮೆರಗು—
ಜೀವನದ ಅರಗು
ಸುತ್ತುತಲಿ ಬಳಿಸುತಲಿ
ಬಿತ್ತರದಿ ಮುಟ್ಟಿತು.
ಏಳಿಗೆಯನೋಲಗದಿ—
ಗೆಳೆತನದಮೇಳನದಿ
ಸಿರಿಯಾದ ಹೆಮ್ಮೆಯನು
ಒಲುವಾಗಿ ತಂದಿತು.

ದೇಗುಲದಮೂರ್ತಿ—
ಮಂಗಲದಕೀರ್ತಿ
ತೇಜಮಯ ಜ್ಯೋತಿಯನು
ಪ್ರಜ್ವಲಿಸಿ ಮೂಡಿತ್ತು.
ದೀವಿಗೆಯ ಬೆಳಕು—
ಚಲ್ವಿಕೆಯ ತಳಕು
ಪ್ರಖ್ಯಾತ ಮೂರ್ತಿಯನು
ಬಿಂಕದಲಿ ಮೆರೆಸಿತ್ತು.

ನೃತ್ಯಾವಿಲಾಸದಲಿ—
ಕೃತಿದೇವಿನೊಸಲಲ್ಲಿ
ಅಡಿಧಾರೆ ಮಣಿಹಿಡಿದು
ನಿಡಿದಾಗಿ ನಮಿಸಿತು.
ಕಾಂತಿಯನು ನೇವಿದಿಸಿ—
ಪರಿಶುದ್ಧಮೊಗದಲ್ಲಿ
ದೇಗುಲದಿ ಚಿರವಾಗಿ
ಸೋಗಿನಲಿ ನಿಂತಿತು.

---

# ಮುಂಜಾನೆ

ರವಿಕಿರಣ ತಿಳಿಬೆಳಕು
   ಬಾನಿನಲಿ ಬೆಳಗುತಿರೆ,
ಮೇಘಮಯ ಮುಗಿಲಲ್ಲಿ
   ಚಲುರಶ್ಮಿ ಬೆಳಗುತಿರೆ,
ಮೂಡಲಿನ ನಾಡಿನಲಿ
   ವೈಭವವು ನಲಿಯುತಿರೆ,
ಮುಂಜಾನೆ ಮೆರೆಯಿತು
   ನಿಶಿದೆಸೆಯ ನೆರೆದಾಟಿ.

ತೆಂಕಲಿನ ತಂಗಾಳಿ
   ತೀಡುತಿರೆ ಇಂಪಾಗಿ,
ಮೋದದಲಿ ಹಾಡುತಿರೆ
   ಹಕ್ಕಿಗಳು ಗುಂಪಾಗಿ,
ಹಚ್ಚನೆಯ ಹೊಲದಲ್ಲಿ
   ತೆನೆಹಸುರು ತೂಗುತಿರೆ,
ಮುಂಜಾನೆ ಮೆರೆಯಿತು
   ನಿಶಿದೆಸೆಯ ನೆರೆದಾಟಿ.

ಒಕ್ಕಲಿನ ಕೊಪ್ಪಲಲಿ
   ಜೀವಸಸಿ ಬೆಳಗುತಿರೆ,
ಸೃಷ್ಟಿಯಾತೆರೆಯಲ್ಲಿ
   ಕೊನೆಅಂಚು ಮಿನುಗುತಿರೆ,
ವೈಭವದ ಉದಯದಲಿ
   ಸಂಭ್ರಮವು ತೀಡುತಿರೆ,
ಮುಂಜಾನೆ ಮೆರೆಯಿತು
   ನಿಶಿದೆಸೆಯ ನೆರೆದಾಟಿ.

---

# ಪರಾಜಯದನಂತರ

ವಿಜಯಮಹಾದಿಯು ಸುತ್ತಲು ಎತ್ತಲು,
ಮುಚ್ಚಿತು ಮುಬ್ಬು ಹೇರಳದಿ ;
ದೂರದ ಶಿಖರದಿ ಮಿನುಗಿತು ವಿದ್ಯುತ್,
ಭೀಕರ ದಿನಗಳಲಿ.

ಬಂಟನ ಭರವಸೆ ಸಾಗಿತು ಹಾರಿ,
ಧರೆಯಲಿ ಮೆರೆಯುತ ನೆಟ್ಟನೆ ಸಾರಿ ;
ಕೊಂಬುತುತ್ತೂರಿ ತುಂಬಿತು ನೆರವಿ,
ಸಮರವ ಇಮ್ಮಡಿಸಿ.

ಸ್ವಚ್ಛಸ್ವತಂತ್ರದ ಸಫಲದ ವಿಜಯ,
ಮೊಳಗಿತು, ಮೊಳಗಿತು ಮೋದದಲಿ ;
ಶೌರಿಯ ಕೋರಿಕೆ ಚಲಿಸಿತು ಪ್ರಸರಿ,
ಯೋಜನ ಯೋಜನದಾಚೆಯಲಿ.

ವೈಭವ ಉದಯವು ಮಿನುಗಿತು ತೂರಿ,
ನವ ನವ ಶಕ್ತಿಯಲಿ.

---

# ಜೀವನ

ಜೀವನ, ಸರಸವಿರಸದಲಿ
ತಲೆಯೆತ್ತಿ ತೂರುವೆನು,
ನನ್ನಾತ್ಮವನು ತೃಪ್ತಿಸುವ
ವಾಣಿಯನು ಸ್ತುತಿಸುವೆನು ;
ಜಗಜಾಳಿನಾವರಣದಲಿ,
ಸುಗಂಧಿಸುವ ಮಾರುತನ ;
ಮರೆಹೊಕ್ಕು, ಜೀವನಜಾಡನ್ನು
ಜಾರಿ ; ಮನದ ದುಗುಡವ ಕಳೆಯುವೆನು–ನಾನು.
ಶಕ್ತಿಮಯ ಪ್ರಬಲದಲಿ
ನಿಧಿ, ನಿಕ್ಷೇಪ, ಸುಮ್ಮಾನದಲಿ ;
“ಎನ್ನ ಎದುರಿಸುವವರಾರು ?
ಶಕ್ತಿ, ಸಾಮರ್ಥ್ಯ, ಸಂಜೀವನದ ಮುಂದೆ.”
ಸಿದ್ಧಪುರುಷನು ಸಿದ್ಧಾಂತಿಸಿ,
ಜೀವನಜಾಡ ಜಾರಿಲ್ಲವೆ ?
ಜಗದಜಾಡನು ಜಾರುವೆನು, ನಾನು
ಸಿದ್ಧಪುರುಷನಿಗಿಂತ ಮಿಗಿಲಾಗಿ.
ನಾ–ಪ್ರೇಕ್ಷಿಸಿದ ಜೀವ
ಜಾಡ್ಯಮಯನು ತಿಳಿಯುವನು,
“ಎನ್ನ ನಿಸ್ತೇಜ ನಿಶ್ಶಕ್ತಿ ನಶಿಸಿಹೋಗಿ
ಸುದಿನದ ಛಾಯೆಯಲಿ ಅಡಗುವಾಗ.”
ನೀವು ಜೀವನಸಂಗ್ರಾಮದಿಂ ಬನ್ನಿ,
ಜೀವ ಜಾಡಿನಿಂ ಬನ್ನಿ ;
ಏಳುಬೀಳುವ ದಾಂಟೆ ;
ಹಸುರಿನಿಂ ಸುತ್ತಿರುವ
ಹೊಲಹಾಯ್ದು ಹಾರಿ,
ಜೀವನ ನಿಸ್ಸಾರವನು ಸೆಳೆದು,
ಜೀವನಜಾಡನು ಜಾರಿದಾಗ
ನಮ್ಮ ಜೀವನ ಜಯಿಸಿ ಜಗದೇಕವೇರುವುದಾಗ.

# ಝರಿ

ಗಿರಿ ಕಣಿವೆ ಕಂದರದಿ ಝರಿ ಜಾಣ್ಮೆ ಜಾರಿ,
ಸುತ್ತುತ್ತ ಸರಿಯುತ್ತ ತಂಬೆಲರ ಸೇರಿ ;
ವಿಸ್ತರದ ಹಚ್ಚನೆಯ ಹಳುವವನು ಹೂಡಿ,
ಏರುವುದು, ಜಾರುವದು ; ಜಾಣ್ಮೆಯನು ತೋರಿ
ಚಿಗಿಚಿಗಿದು, ನೆಗೆನೆಗೆದು, ಜರಗಿನಲಿಸಾಗಿ
ಕೊಪ್ಪಲಿನ ಒಕ್ಕಲಲಿ ಕೌಶಲವಹಾಡಿ
ಹರಿಯುವುದು, ಸರಿಯುವುದು ರಾಗದಲಿ ಮೊಳಗಿ.

ಝರಿ ಜಾಣ್ಮೆ ಜಾರಿತ್ತು ವೈಭವವ ನಲಿಸಿ,
ಹಳುವದಲಿ ಹೂಡಿತ್ತು ಹಚ್ಚನೆಯ ಬೆಳಗಿ ;
ಮೃಗಪಕ್ಷಿ ಪ್ರೇಕ್ಷೆಯಲಿ ಸಾರಿದವು ಕೆದರಿ,
ಔನ್ನತ್ತ್ಯದ ಮುಗಿಲನ್ನು ಪಾಡಿದವು ವಲಸಿ ;
ರವಿಕಿರಣಕಾಂತಿಯಲಿ ರಂಜಿಸಿತು ಪ್ರಕೃತಿ,
ಸೃಷ್ಟಿಯಾತೆರೆಯಲ್ಲಿ ಮೆರಗಿ, ಮೆರಗಿ.

---

# ರೂಪಾರಾಧನೆ

ಅವನೊಬ್ಬ ಕಲೆಗಾರ, ಕುಶಲಮತಿಗಳ ವೀರ ;
        ನಿಶಿತದಲಿ ಉದ್ಯಾನ – ಅದು ಅವನ ಬಿಡಾಳ,
ನಟಶ್ರೇಷ್ಠನವನಲ್ಲ – ಕಲೆಗೆ ಅವನಿಗೆದುರಾರು ಇಲ್ಲ,
        ಮನದಲ್ಲಿ ಬೆಳೆಸಿದ್ದ ಕಲೆಗಾರ ಒಲುವಿಂದ,
ಮೌನದೇವಿಯನು ಚಿತ್ರಿಸಲು ಬಗೆಯಿಂದ.
        “ಕುಂಚಕೊನೆಯಲಿ ಮಿಂಚುದೇವಿಯನು”
ಕರೆಯಲೆತ್ನಿಸಿದ ಮೌನನಿಶಿತದಲಿ – ಸಂಧಾನತಾಣದಲಿ,
        ಕಲೆಗಾರಬೀಡಿನಿಂದ.
ನಿಶ್ಚಲತೆ ಮೊಗದಲ್ಲಿ ತೋರಿತ್ತು ಶೋಭಾಂಕುರ,
        ಕಲೆಗಾರನಾ ಉನ್ನತಧ್ಯೇಯಸಾಧನಾ –
ಮಾರ್ಗವ್ಯಾಪಾರಪಾರ.
        ನಿಶಿತಸಮಯದಲಿ, ಸಂಧ್ಯಾಸಮೀರಣದಿ,
ಮಿನಿಗಿತ್ತುವರ್ಣ ಸ್ವರ್ಣವನುಹೊಳೆಸಿ.
        ಮೌನದಲಿ ಕಲೆಗಾರ ನೆನೆದಿದ್ದ ದೇವಿಯನು,
ಒಮ್ಮೆದರ್ಶನವ ನೀಡೆಂದು ಚಿತ್ರಿಸಲು.
        ನಿಶಿತದಲಿ ರೂಪಾರಾಧನೆ – ನಡೆದಿತ್ತು
ಉದ್ಯಾನದಲಿ, ಕಲೆಗಾರನಾಗುರಿಯ ಹಾದಿಯಲ್ಲಿ.

“ಕುಂಚಕೊನೆಯಲಿ ಮಿಂಚುದೇವಿಯನು”
ಕರೆಯಲೆತ್ನಿಸಿದ ಕಲೆಗಾರ!
ಮೌನನಿಶಿತದಲಿ, ಉದ್ಯಾನಬೀಡಿನಲಿ,
ಪೂಜಿಸಿದ ದೇವಿಯನು ತನ್ನತಾಮರೆತು.
ಕಲೆಗಾರನಾಪೂಜೆ ಮುಗಿದಿತ್ತು ನಿಶಿಯಲ್ಲಿ,
ಬಹುಕಾಲ ಧ್ಯಾನದಲಿ ಮೈಮರೆತಮೇಲೆ.
ಮೌನದೇವಿಯಪ್ರೀತಿ ಗಳಿಸಿದ್ದನವನು,
ದೀರ್ಘಸಾಧನೆಯೋಗ ನಿಶಿತದಲಿನಡಿಸಿ.
ಉದ್ಯಾನದಲಿ ಮಿನುಗಿತ್ತು ನವಚೇತನ,
ಸಂಯಮಿಯ ದೇವತಾರ್ಚನೆಯಿಂದ.
ನಮಿಸಿದನು ಕಲೆಗಾರ, ದೇವಿಚರಣವಮುಟ್ಟಿ;
ನೆಮ್ಮದಿಯ ಮಡುವಿನಲಿ ಮುಳುಗಿ.
ಹರಿಸಿದಳು, ಮೌನದೇವಿ! ಕಲೆಗಾರನಾ ಕೃತಿಗೆ
ವೃಷ್ಟಿಧಾರೆಯ ಹರಿಸಿ ತೃಪ್ತಳಾಗಿ.
ಕಲೆಗಾರನಾಖಚಿತ ಕುಂಚದಕೆಲಸ ಮುಗಿಸಿತ್ತು
ರೂಪಾರಾಧನೆ – ಸ್ತುತ್ಯಪ್ರೇರಣೆ.

---

# ಅವನ ಹಾದಿ

ಜೀವನವು ಹೊರೆಯಾಗಿ
ಬಾಳುವೆಯು ಧಗೆಯಾಗಿ
ರೀತಿಸಿತು ಅವನ ಹಾದಿ,
ಕೂಟದಲಿ ಕಾರ್ಮುಗಿಲು
ತೋರ್ವಂತೆ, ಕಾಣ್ಬಂತೆ
ಬಾಳಿನಲಿ ಕೂಡಿತ್ತು ಧಾಳಿ.

ಜೀರ್ಣಶೀರ್ಣದ ಉಡುಗೆ
ಬಾಳುವೆಯ ಬಲುಬೇಗೆ
ಪೀಡನದಿ ಭಾದಿಸುತ ಸಾಗಿ,
ಕಂದುನೊಂದಿದ ದೇಹ
ಜೊಳ್ಳುತಿರುಕನ ನೋವ
ಅರಿಯುಬಲ್ಲದೆ ಜಗವು ಎಲ್ಲ?

ಹಸಿವುಹುಯಿಲಿನ ಮೋರೆ
ವಿಕಟನೋವನು ತೋರೆ
ಸಮ್ಮುಖದ ಗದ್ದಲವು ಜಾರೆ—
ರೌದ್ರರಾಳಿನ ಬೀಳು
ಮೋರೆತಗ್ಗಿನ ಬಾಳು
ರಣದಲ್ಲಿ ಮುಗಿದಿತ್ತು ಸಾರೆ.

ವಿವಿಧ ವಿಲಯದ ಬೀಡು
ರೂಪಕೇಡಿನ ನಾಡು
ಬಾಳುವೆಯ ನೆಲೆಯಾಯ್ತು ಸಾರ್ಥ,
ಅಖಿಲ ಮೋಹದ ಸ್ಥಾನ
ಪ್ರಸರ ನೋಟದ ತಾನ
ಬಾಳುರಿಗೆ ಮರೆಯಾಗಿ ಪೂರ್ತಿ.

# ಮಾರ್ದನಿ

ದೂರದಲಿ ತಾಣದಲಿ
ಪಿರಿದೊಂದು ವೃಕ್ಷದಲಿ
ಏರಿತ್ತು ಖಗವೊಂದು—
ಚಲುವು.

ಇನಿದುಸರ ಸವಿಬೆರಸಿ
ತನುಅನುವ ಅದರಿಂರಿಸಿ
ಕಾನನದಿ ಹಾಡಿತ್ತು—
ಹಿರಿಮೆ.

ರಾಗದಲಿ ಮೇಳದಲಿ
ಆಗಸದ ನೇಸರದಿ
ಸಾಗಿತ್ತು ಪ್ರವಹದಲಿ—
ನಡೆದು.

ಗಮ್ಯದಲಿ ನೋಡಿದೆನು
ಒಮ್ಮೆಯಲೆ ಬೆರೆತುದನು
ದುಮ್ಮಿಕ್ಕಿ ಗಾನದಲಿ—
ತನ್ನ ತಾಮರೆತು.

ಯೋಜನದ ಯೋಜನದಿ
ಭಾಜನದ ನೇಸರದಿ
ರಾಜಿಸುತ ಮಿರುದನಿಯು—
ಕೂಗಿತೆನ್ನೆಡೆಗೆ.

---

## ಕಾಳಕಿಚ್ಚು

ಕಾಳಕಿಚ್ಚು, ಸಮರಸುಳಿವು
ಪಡುವನಾಡನೇರಿಬಂತು.
ಶಾಂತಿಸತ್ವ ಸರಿದುನಿಂತು—
ಧಾಳಿಧಾರೆಗೆ ಎಡೆಯನಿತ್ತು.
ರೌದ್ರರಾಳು ರೀತಿಸಿತ್ತು
ಧರೆಯನೆರೆಯನೇರಿನಿಂತು.
ಕ್ರೂರಕರ್ಮಿ ಕೈಯಸಾಗಿ
ಪೃಥ್ವಿ, ಕಡಲ, ಹವೆಯನೇರಿ
ಸುತ್ತುಗಟ್ಟಿ, ಒಟ್ಟನೆಳೆದು
ಮಾನವೀಯ ಸೂರೆಹೋಯ್ತು
"ಅಖಿಲ ಸಕಲ ಕ್ಷುಲಕವೆನಿಸಿ"
ಉಗ್ರರೂಪ ರೂಢಿದಾಗ
ಧಾಳಿಧಾರೆ ಹಾಯುವಾಗ
ಕ್ರೂರಕರ್ಮಿ ಕೈಯಸುಟ್ಟಿತೇ.
ಕಿರಣಕಾಂತಿ, ಸೊಬಗಶಾಂತಿ
ದೋರಿದೂರಮರೆಯಿತೇ ?

---

# ಪ್ರತೀಹಾರಿ

ಅರಸನಾಣತಿಯಂತೆ ಹಳುವಿನಲಿಳಿದು ಮಲೆಗಳನೇರಿ,
ಹೊರಟು ನಡೆದನು, ಪ್ರತೀಹಾರಿ! ಆಜ್ಞಾಧಾರಕ;
ಸಂಧ್ಯಾಸಮೀರಣದಿ, ತುಂಬುಬಯಲಲಿ ಹೊರಟು,
ಝುರಿನೀರು ತಿಳಿಹೊಳೆಯು ದಟ್ಟಡವಿ ಪಾತ್ರದಲಿ;
ನಡೆದು ಮರಳಿದ ಹಾದಿ ಪೂರ್ವಪರಿವಿಡಿದು.
ಅಲೆದಲೆದು ಬಸವಳಿದು ಕತ್ತಲೆಯಕೂಟದಲಿ,
ನೋಡಿ ಬೆದರಿದ ಮಿಂಚು ಹೊಳೆಹರಿದುದನು ಕಂಡು;
ಆಜ್ಞೆಹೊರೆಹೊತ್ತು, ಅರಸನಾಣತಿಗೆ ಒಳಪಟ್ಟು;
ಮಿಂಚಿನಲಿ ನಡೆದು ಸವೆದನು ಹಾದಿ ಮುಬ್ಬಿನಲಿ,
ಸಣ್ಣದನಿ ಕಹಳೆ, ಕಾನನದ·ನೀರವದಿ ಕೇಳಿಬಂದಿತು ಒಮ್ಮೆ;
ನಡುವೆ ಪ್ರವಾಸಿಗನ ಎಚ್ಚರಿಸಿ, ಬೆದರಿಸಿತು ಕೊನೆಗೆ;
ಗುಡುಗು ಸಿಡಿಲುಗಳು ಮುಗಿಲಿನಲಿ ಗಜರುವ ತೆರದಿ,
ಕಾನನದ ನೀರವವ ಒಡೆದು ದನಿಗೂಡಿಸಿತು ಕಹಳೆ;
ಹೊರಳಿ ಭರದಿ ಸಾಗಿದನವನು, ಅತಿದೂರ ನೇರದಲಿ
ಕಿರುದೀಪ ಅಡವಿಯಲಿ ಮಿನುಗುತಿದುದನು ಕಂಡು;
ಹಚ್ಚಹಳುವಿನಲಿ, ಗೂಢಕಾನನದ ಕತ್ತಲಲಿ;
ಕಿರುದೀಪಕಿರಣ, ಹಾದಿಗನ ಜತೆಯಾಯ್ತು;
ಇಮ್ಮಡಿಸಿ, ಮುನ್ನಡೆದು; ದೀರ್ಘಹೆಜ್ಜೆಯಲಿ;
ದುಮ್ಮಿಕ್ಕಿ, ಮೌನದಲಿ ಮರೆಯಾದನವನು;
ಪ್ರತೀಹಾರಿ! ದಿಗ್ವಾರ್ತೆ ಠಾಣೆಯಲಿ ಘೋಷಿಸಲು ಅಂದು.

---

# ಪಥಿಕ

ಮೇಲುನದಿ ದಂಡೆಯಲಿ ನಡೆದಿದ್ದನಾಮನುಜ,
ಮುಂಜಾವಿನಲಿ ಒಬ್ಬನೊಬ್ಬ ;
ಮೂಡಿತ್ತು ಮಂದಾನಿಲ, ನೇರದಲಿ ಆದರದಿ ;
ವೃಕ್ಷದಲಿ ಉಲಿಉಲಿವ ಹಕ್ಕಿಗಳ ಕೂಡಿ.
ಮೆಲುನುಡಿಯ ಗಾನಕ್ಕೆ, ಮಿಾಸಲಾಗಿರುವಂತೆ ;
ಹಾಡಿದವು ಮಾಮರವನೇರಿರುವ ಹಕ್ಕಿ.
ಹಣ್ಣುಹೂವ್ಗಳತಾಕಿ ಮಂಡಲದಿ ನಾದದಲಿ
ಕೊರಲಿಂಪು ಗಾನದಲಿ ಸವಿಯನುಣಿಸಿ,
ಮೇಲುನದಿ ದಂಡೆಯಲಿ ನೆರೆದಿತ್ತು—
ಮಂದಹಾಸ – ಅಖಿಲ ಸಮೂಹದ ಕೋಶ.
ದಂಡೆಹಾದಿಯ ಹಿಡಿದು, ಮುಂಜಾವಿನಲಿ ;
ಹಾಯುವವ ಮನುಜನಿವನಾರು ?
ಹಣ್ಣುಹೂವ್ಗಳತಾಕಿ ಮಂಡಲದಿ ನಾದದಲಿ
ಕೊರಲಿಂಪು ಗಾನದಲಿ ಬೆರೆಸಿರುವ
ಹಕ್ಕಿಗಳ ಜತೆಗೂಡಿ ಮೇಳದಲಿ
ಹಾಯುವವ ಪಥಿಕನೊ ಏನೊ ?

ಸೃಷ್ಟಿಮಿಳಿತದಲಿ, ಮೌನನಿಧಿಯಲಿ
ಮುಳುಗಬಂದಿಹನೊ ಏನೊ?
ಚಲುವ ನಲುವಿನ ಲತೆಯ ಮುಡಿಯಲ್ಲಿ ಬಾಳಿ
ಹೊರಳಿ ಬಿರಿದೊಡೆದು ಪರಿಮಳವ ಬೀರುವಾ
ಮುಗುಳ ಮಲ್ಲಿಗೆಗೆ ಮನವ ಮೋಹಿಸಿದನವನು.
ಮುಂಜಾವಿನಲಿ, ಮೇಲುನದಿ ದಂಡೆಮಾರ್ಗದಲಿ;
ಆ ಪಥಿಕ, ತತ್ವೋಪಾಸಕನ ನೇರವಲಿ ಸುತ್ತಲಲಿ
ಮೆರೆದಿತ್ತು ಪ್ರಕೃತಿಪ್ರವಾಹ – ಮುಂಜಾವಿನಲಿ
ಪಥಿಕಶ್ರೇಷ್ಠನ ಮಾರ್ಗ ಪೂರ್ಣಕೂಡಿ.
ನಡೆದಿದ್ದನಾಮನುಜ ಮೌನದಲಿ ಎತ್ತಲೊ?
ದಂಡೆಮಾರ್ಗವಬಿಟ್ಟು ವಿಜನಸ್ಥಾನಕೆ ತಾನು.

*　　*　　*　　*

ಮೇಲುನದಿ ದಂಡೆಯಲಿ ಮೂಡಿತ್ತು ಕಿರಣ,
ಪಥಿಕಶ್ರೇಷ್ಠನ ಮಾರ್ಗಕ್ರಮಣ ಹಿಡಿದು;
ಮನದಲ್ಲಿ ನೆಲೆದಿತ್ತು ಗಾಢಭಾವ,
ತತ್ವೋಪಾಸಕನ ಅತ್ಯಂತದಾಹ;
ಮೆಲ್ಲನೆಯ ಮನದಲ್ಲಿ ಅಂದಿದ್ದ ರಾಗ,
ಕೊನೆಯುಮುಟ್ಟಿತು ಖೇದಕೂಡಿ;
ಗಾಢಭಾವವು ಸ್ಮೃತಿಗೆ ಬಂದು,
ಪಥಿಕಶ್ರೇಷ್ಠನ ಶಾಂತತೆಗೆ ತೊಡರವಿಟ್ಟು.
ಮನದೊಳಗೆ ಚಿಂತಿಸುತ ನೆನೆದಿದ್ದ ಆ ಮೌನಿ,
"ಪ್ರಕೃತಿಯಲಿ ಎಲ್ಲವೆಲ್ಲವು ಗೆಲುವಬೀರಿರಲು
ಜಗವೇಕೆ? ಕಾರ್ಮುಗಿಲ ಭ್ರಾಂತಿಗೆ ಎಳೆಯುತಿದೆಯೆಂದು?
ಸೃಷ್ಟಿತೆರೆ ಮಂದಹಾಸದಲಿ ನಾ–ಮೆರೆಯುತಿರಲು
ನೂರಾರು ಜೀವಗಳ ಜೀವಾಳ ಕುಂದಿ ಏಕೆ
ಸವೆಯುತಿದೆಯೆಂದು?

ಜಗದ ಮನದಲಿ ಅನ್ಯೋನ್ಯ ಏಕೆ? ನೆಲೆಯಿಸಲಿಲ್ಲ
ಎಂಬ ಚಿಂತಾಗ್ನಿ ಉದಯಿಸಿತು ಅವನಲ್ಲಿ,
ಮಧುರವಾಸ – ಆ ಮೇಲುನದಿ ದಂಡೆಯಲ್ಲಿ
ದಹಿಸಿತವನನ್ನು, ಕ್ರೂರಾವೇಶಕ್ರೋಶ.
ಪೃಥ್ವಿಯಲಿ ತಮ್ಮಗಳ ಮೇಲ್ಮೆ ಮರೆತು
ಮಲಗಿರುವ ಈ ಜನವೇಕೆ? – ಸರಿಪಡಿಸಲೊಲ್ಲರು
ತಮ್ಮಗಳ ಒಳಜಗಳ," ಎಂದು ಮರುಗಿದನವನು
ಮೌನಿ – ವೀರಸೇನಾನಿ.
ಮುಗಿದಿತ್ತು ಈದೊಂದುಳಿಯ ಪೀಡಾವಿವರಣೆ
ಮೌನಾವಲಂಬಿಯು ಅಭಯು ಯೋಜನೆಯಿಂದ
ವೃಕ್ಷದಲ್ ಉಲಿಉಲಿದಿತ್ತು ಹಕ್ಕಿಗಳು ಕೂಡಿ
ಮೌನಿ ಬೆರೆಸಿದನು ಆ ಕೊರಲಿಂಪು ಗಾನದಲಿ
ಒಮ್ಮೆಯೇ ಖೇದ ಮರೆತು.
ಪ್ರಕೃತಿ ಆರಾಧನೆಗೆ – ತದೇಕಧ್ಯಾನಕ್ಕೆ ಹಿಂದಿರುಗಿ
ಬೇಡಿದನು, ಈಶನಲಿ – ತತ್ವೋಪಾಸಕ, ವೀರಪಥಿಕ.
ಶಾಂತಿಸಮ್ಮತ ಮೂಲಕಾಂತಿ.

---

# ಯೋಧರು

ಇಂದೇನು ಬಾನಿನಲಿ ಅತುಲಲಾವಣ್ಯ,
ಮಂದಮಾರುತನ ಮಿಳಿತದಾಗಮನ;
ಉದಿಸುತಿದೆ ದುರ್ಗದಲಿ ಹೊಸಹುರುಪು ಚೇತನ,
ಮೊಳಗುತಿದೆ ಕಹಳೆಯು ಕೂಡೀವರ್ತನ.

ಭವ್ಯದೇವಿಯ ಭವನ ಮುತ್ತಿಹರು ಅವರು,
ನೂರಾರು ಜೀವಿಗಳು ಮಾಯವತಿ ಪೀಠದೆದರು;
ಹಿಡಿಯಲಿ ಮಿನುಗುತಿದೆ ಬಂಟರಾ ಕೈ ಅಲುಕ,
ಮಿತಿಮೀರಿ ಹರಿಯುತಿದೆ ಉತ್ಸಾಹದಾಳುಗಳ ಚಳಕ.

ಕೊಂಬುಕಹಳೆಯ ಕೋಲಾಹಲದ ವಿಸ್ತರಣ,
ತುಂಬುತಿದೆ ಅಂಗಳದಿ ಯೋಧವೀರರ ಗಡಣ;
ನೂರಾರು ಜೀವಿಗಳು ಅಡ್ಡಬಿದ್ದಿಹರು ಪದತಲದಿ,
ವಿಜಯಹಾದಿಯ ಕೋರಿ ಮಣಿದು ವಿಧವಿಧದಿ.

ಭಗವತಿಯ ಪೀಠದಡಿ ಉರಿಯುತಿದೆ ಸೊಡರು,
ಎತ್ತೆತ್ತ ಹೊಳೆಯುತಿದೆ ನೀಲಾಂಜನದ ಮಿರುಗು;
ತಮಟೆ ಮದ್ದಲ ಕೊಂಬು ಕಹಳೆಯು ಗದ್ದಲ,
ನೂರ್ಮಡಿಸಿ ಮೊರೆಯುತಿದೆ ನೆರವೀಯಸಪ್ಪಳ.

ಅಂಬುಜನೇತ್ರಿ ಮಾಯವತಿ ಮೊಗದೆದರು,
ನಿಂದಿಹರು ಆಣತಿಗೋಸುಗರವರು ಸೇವಕರು;
ಉತ್ಸಾಹ ಕಂಠದಲಿ ಬೆರಸುತಿದೆ ಗರ್ಜನೆ,
ದಳದಾಳುಗಳ ಹಾದಿಫಲ ಝೇಂಕಾರಸಾಧನೆ.

---

# ಮುಗಿಲ ತಾರೆ!

ಮುಗಿಲ ತಾರೆ
ಚಲುವ ನೀರೆ
ಬಾನಬಯಲ
ಬೆಳಗು ತಾರೆ!

ಗಗನವೇರಿ
ಮುಗಿಲಸೇರಿ
ಧರೆಯ ಬೆಳಗಿ
ಮೆರೆಸು ತಾರೆ!

ಮುಗಿಲ ಬಿಂಬ
ರಜನಿರಂಗು
ಬಾಹ್ಯಬಾಳು
ತೋರು ತಾರೆ!

ಭುವಿಯ ಬಣ್ಣ
ಬೈಗು ಕಣ್ಣ
ಭಾವ ತೋರಿ
ಮಿನುಗು ತಾರೆ!

ಕಾಂತಿ ಕಿರಣ
ಬೆರೆಸಿ ಮೆರೆಸಿ
ಮನವ ತನುವ
ತಣಿಸು ತಾರೆ!

---

# ವಿಹಾರಿಣಿ

ಶೈಲಮಂದಿರದಲ್ಲಿ
ಮಂಡಿಸಿದ್ದಳು ದೇವಿ
ಮತ್ತಾವ ತೊಡಕಿಗೋ?
ಚಿಂತಿಸುತ ಕುಳಿತು.

ಮಂದಿರದಲೆತ್ತಲು
ಪ್ರಾಂಗಣದ ಸುತ್ತಲು
ತುಂಬಿತ್ತು ಕತ್ತಲು
ಕದ್ದು ನಡೆದು.

ಮಿನುಗಿತ್ತು ಸೊಡರು
ಮೂರ್ತಿಮುಂದೆ
ದೇವಿಮೊಗದೊಲುಮೆ
ಚಲುವ ಹರಿಸಿ.

ಯೋಜನದ ಮುಗಿಲಿನಾ
ಚಲುವಿನಾ ತಾರೆ!
ಮಿನುಗಿದಳು ಸ್ವರ್ಣದಲ್ಲಿ
ಪಙ್ತಿಗೂಡಿ.

ವಿಜನಾಲಯದಿ
ಮೌನನಿಧಿಗೆದುರಾಗಿ
ನಮಿಸಿದಳು ದೇವಿ
ತೇಜ ಹೊಳೆಸಿ.

ಮೀಟಿದಳು ಮಾಲಿನಿ
ಮಾಧುರ್ಯವೀಣಾ
ಶಿವಪೂಜೆಗೈವದಕೆ
ಚಿತ್ತಹರಿಸಿ.

ಚಿನ್ಮಯಾತ್ಮಕಮೂರ್ತಿ
ಸ್ಮರಣೆಯಲಿ ನೆನೆದು,
ಸಂತಸದ ವಾಹಿನಿಯ
ಸೆಳೆಸಿದಳು ರಾಗದಲಿ ;

ಶಾಂತತೆಯ ಪಡಿನೆಳಲ
ಮಂದಿರದಿ ಸೃಷ್ಟಿಸಿ,
ನಾದಮಯ ನೋಟವನು
ದೇಗುಲದಿ ತೋರಿದಳು.

ಜಟಾಧಾರಿಣೀ—
ತೇಜೋಮಾಲಿನಿ !
ಆಲಯವಿಹಾರಿಣಿ
ಕಾಂತಿಸೃಷ್ಟಿ ಹರಿಸಿ.

ಸಲ್ಲಿಸಿದಳವಳು—
ಶೈವೋಪಾಸನೆ
ಭವ್ಯಮಂದಿರದಲ್ಲಿ
ಮೇಳ ನುಡಿಸಿ.

ಮೌನಮುದ್ರೆಯನೊತ್ತಿ
ಮಂಡಿಸಿದ ಶೈವಮೂರ್ತಿ !
ರಾಜಿಸುತ ದೇಗುಲದಿ
ಪ್ರಖ್ಯಾತಕಾಂತಿ !

ದೇವಿವದನದಲಿ
ನಲಿದಿತ್ತು ಮಂದಹಾಸ,
ಶೈವಾರಾಧನೆಯ
ಪರಿತಾರ್ಥಹಾಸ.

ಜ್ಯೋತಿಜೋಗುಳದಲ್ಲಿ
ಮಿನಿಗಿತ್ತು ಶ್ವೇತಶಿಲೆ,
ಕಾಂತಿ ರಮಣೀಯ
ಪ್ರಾಶಸ್ತ್ರಕ್ರೀಡೆ.

ವಿಜನ ಮಂದಾರಣದಿ
ಶೈವೈಕ್ಯಸಾಧನದಿ,
ಹರಿದಿತ್ತು ವೃಷ್ಟಿಧಾರೆ !
ವಾಹಿನಿಯ ಸಾಂತ್ವಧಾರೆ !

---

# ಹಸುರು ಹೊಲ

ಹಸುರೊಂದು ಹೊಲದಲ್ಲಿ
ಮುದದೊಂದು ಸುಧೆಯಲ್ಲಿ
ಹಕ್ಕಿಯೊಂದು ಹಾಡಿತು
ಧ್ವನಿಯೊಂದು ಕೂಗಿತು.

ಕಂಗೊಳಿವ ಕಣಿವೆಯಲಿ
ಸುಂದರದ ವನದಲ್ಲಿ
ಮುಗುಳೊಂದು ಬೀರಿತು
ಚಲುವೊಂದು ಕೋರಿತು.

ಮುಗಿಲಿನಾ ಮೇಘದಲಿ
ಗಗನದಾ ಗೀಟಿನಲಿ
ಚಿಕ್ಕಿಯೊಂದು ಮಿನಿಗಿತು
ಚಂದವನು ತಂದಿತು.

ಸರಸಿಯಾ ತೀರದಲಿ
ಘನತೆಯಾ ಸಂತಸದಿ
ಸೀರುಂಬೆ ಸೀರಿತು
ಸರಸಿಯನು ಮೆರೆಸಿತು.

ನಿಶ್ಶಬ್ದ ವನದಲ್ಲಿ
ನಿಸರ್ಗ ಭವನದಲಿ
ನೆಮ್ಮದಿಯು ನೆಲೆಸಿತು
ಶಾಂತತೆಯು ತಂದಿತು.

---

# ಕವಿಗೀಳು

ಉದಯುದಲಿ ಸೊಬಗಿನಲಿ
ಶಾಂತತೆಯ ಚಲುವಿನಲಿ
ಕವಿಯೋರ್ವ ಕಂಡೆನಾ,—
ಕಾನನದ ಕವಲಬಳಿ.
ಕವಿ ಕಾವ್ಯ ಫಲಬಯುಸಿ
ಕಾವ್ಯರಾಜ್ಯವ ನೆನೆಸಿ,
ಕವಿಯ ನಾ ಕಾಡಿದೆನು
ಕಾನನದ ಕವಲಬಳಿ,
ಕವಿಯೆನ್ನ ದೀರ್ಘನೋಡಿ
ಮೊಗದಗೀಳನು ನೋಡಿ,
ವನದ ಹಿರಿಮೆಗೆ ಒಯ್ದನು
ಕಾಂತಿಗಲ್ಲಿಗೆ ತಂದನು.

ಕಾಂತಿಜ್ಯೋತಿಯ ನೋಡಿ
ಕಲೆಯುಬೀಡನು ಕೂಡಿ
ಸರುನೇರ ಸಾಗಿದೆವು—
ನಭದ ಹಕ್ಕಿಯ ನೋಡಿದೆವು,
ಮೌನ ಸಿಬಿಡದಿ ಸರಿದು
ಜೋಗುಳದ ನಿಧಿಯಲಿ ಮೆರೆದು
ಕವಿಯೊಮ್ಮೆ–ಸೊಬಗನೊಮ್ಮೆಯೆ
ಹಾಡಿದನು, ಸೃಷ್ಟಿಮಿಲನದಿ
ಪಾಡಿದನು, ಜೀವಕುಲದಲಿ
ಮೆರೆದು, ನಾ–ಜಾಲನೋಡಿಯೆ ಸರಿದು;
ಕವಿಯ ನಾ ಹೊಗಳಿ, ಗೀಳಬಿಟ್ಟೋಡಿದೆನು.

---

# ಕವಿ - ಕೋಗಿಲೆ

ಕವಿ - ಕೋಗಿಲೆ
ಚಲುಕೋಗಿಲೆ
ಕೂಗಿತು ಬನದಿ,
ವನದಾಸಲೆ
ಮುದದಾನೆಲೆ
ತೂಗಿತು ನಭದಿ.

ಮುಗಿಲಂಚಿನ
ಕೊನೆಮಿಂಚಿತು
ಝಲ್ಲನೆ ಹೊಳೆಸಿ,
ತಟದಾನೆಲೆ
ಮುಗುಳಾಮೆಳೆ
ನಿಶಿಯಲಿ ಮೆರೆಸಿ.

ಅತಿದೂರದ
ಮಲೆಮೇರುವ
ಒಮ್ಮೆಲೆ ತೋರಿ,
ಸರಿನೀರವ
ಪರಿತಾವನು
ಏಕದಿಹಾರಿ.

ಮುದುಮಂಜುಳ
ರವದಂಗಳು
ಮಿಲಿಸಿತು ಬನವ,
ಮಧುಮಾಸದ
ನವಲಾಸ್ಯದಿ
ತುಂಬಿತು ಮನವ.

ಸರುತೀರದ
ಮುದನೇರವ
ಹೊಳೆಸಿತು ಛಾಯೆ!
ಕಿರುತಾರೆಯ
ನೆರೆಪಾರವ
ಮೆರೆಸಿತು ಮಾಯೆ!

ಪಡುನಾಡಿನ
ಎಳೆಗಾಳಿಯು
ಚಿಮ್ಮಿತು ಎಡೆಗೆ,
ಇಡಿಕಾವಳ
ಬಲಿಹಾಳೆಯ
ಮೀರಿತು ಕೊನೆಗೆ.

ಅಣುರೇಣಿನ
ರವದೇಳಿಗೆ
ಕೂಡಿತು ಬಾನು,
ಇಳೆಯಲ್ಲಿನ
ತರವೆಲ್ಲವ
ಬೆಳಗಿತು ತಾನು.

# ದೀಪಮಾಲೆ!

ಕುಟೀರವಾಸದ
ಮುಕುಟಪತಿಗೆದುರು,
ಪ್ರಖ್ಯಾತ ಮೂರುತಿಯು;
ಭದ್ರಪೀಠದ ಮುಂದು,
ಕಾಂತಿ ಹೊಳೆಸಿತು—
ದೀಪಮಾಲೆ!

ಕಲ್ಪಸಾಗರ
ಮುಗಿಲಮಂಟಪಕೆ,
ಯೋಜಯೋಜನ;
ಗಗನವಿಸ್ತರಕೆ,
ಎರಚಿತಾಕಾಂತಿ—
ದೀಪಮಾಲೆ!

ಭಾವಪ್ರಭೆ
ಮನದೊಳಗೆ ಸುಳಿದು,
ಮೂರುತಿಯ ಪ್ರತಿರೂಪ;
ಬಕುತರಲಿ ಮೆರೆದು,
ಕ್ರೀಡಿಸಿತು ಪ್ರಭೆ—
ದೀಪಮಾಲೆ!

ಬೃಂದವನ ಗೋಪಾಲ
ಧೇನುವಿನ ಎಡೆಗೆ,
ಕ್ಷೀರಸಾಗರಲೋಲ;
ವೇಣುವಿನ ಎಡೆಗೆ,
ರಾಜಿಸಿತು ಕಾಂತಿ—
ದೀಪಮಾಲೆ!

ಸಿರಿಹೂವು ಫಲಪುಷ್ಪ
ಪೀಠದೆದರು,
ಲಾವಣ್ಯ ಯುವತಿ;
ರಜನಿ ಮುಂದು,
ಮಿನಿಗಿತು ಮಣಿ—
ದೀಪಮಾಲೆ!

---

# ನೈದಿಲೆ

ಸರುನಡುವೆ ಗೆಲುಮೊಗದಿ ನೈದಿಲೆಯು ಮೆರೆದಿತ್ತು,
ಪರಿಮಳದ ಸವಿಸಾರ ಸರುವಿನಲಿ ಬೆರೆಸಿತ್ತು ;
ಬಿಳಿಮುಗಿಲು ಗಗನದಲಿ ಕೂಡಿತ್ತು ಗೆಲುವಿನಲಿ,
ಸುಳಿಗಾಳಿ ತೆರೆಯಲ್ಲಿ ಮೂಡಿತ್ತು ಬಯಲಿನಲಿ ;
ಶುಕಪಿಕವು ಉಲ್ಲಾಪದಲಿ ರಂಜಿಸಿತು ಎಡೆಯಲ್ಲಿ,
ಏಕದಲಿ ಸಂಪಿಗೆಯು ಸೂಸಿತ್ತು ಮಿಗೆಯಲ್ಲಿ ;
ಸರುಅಲೆಯು ಅಲುಗಾಡಿ ಹಾಯ್ದಿತ್ತು ಮುಂದಾಗಿ,
ಸರಿಸರಿದು ತೂಗಾಡಿ ನೈದಿಲೆಯ ಹಿಂದಾಗಿ ;
ಹೂಡಿತ್ತು ದೋಣಿಯು ದೂರದೆಡೆಸರಿದು,
ಅಲೆಅಲೆಯ ತಗುಲಾಟ ತಾಳಕ್ಕೆ ಹರಿದು ;
ಕೋಲ್ಮಿಂಚು ಕೂಟದಲಿ ತೋರಿತ್ತು ಮಂಡಲದಿ,
ನಲ್ಮೆಯಲಿ ಮಿಂಚಿತ್ತು ನೈದಿಲೆಯು ರಂಜನದಿ ;
ಸರುದೋಣಿ ಓಟದಲಿ ಹೂಡಿತ್ತು ಹೊಸದಾರಿ,
ಗೊಂಚಲಿನ ಅಂಚಿನಲಿ ಸಾರಿತ್ತು ಸರುಹಾದಿ.

---

# ಕವಿಮಹೋನ್ನತಿ

ಇಂದು ರಾಜಸಭೆಯಲಿ ಗಾಯನವು ಧ್ವನಿಗೂಡಲಿಲ್ಲ,
ವೀಣೆ ಅಪಸ್ವರ ನುಡಿದು, ತಂದಿತು ಚಿತ್ತಚಾಂಚಲ್ಯ ;
ಸ್ವರಕುಗ್ಗಿನುಡಿದುದ ಕಂಡು ರಾಜನಿಂತೆಂದ—
"ಕವಿವರ್ಯರೇಕಿಂದು ಚಪಲರಾಗಿರುವರೆಂದು."
ಅರಸನಾನುಡಿಗೆ ಬೆರೆಸಿದನು ಮತ್ತೊಬ್ಬ ಚಾಟುಗಾರ
"ಕವಿ ಎತ್ತೊ ಮನವ ಸರಿಸಿದಂತಿದೆ"ಯೆಂಬೀವಿಚಾರ.
ನಾಚಿದನು ರಾಜಕವಿ, ಈ ಉಪಹಾಸ ತಿಳಿದು
ಮುಗಿಸಿದನು ಗಾಯನವ ವೀಣೆ ಒಲ್ಲದು ಎಂದು.
"ಕಾಶ್ಮೀರಿ ನರ್ತಕಿಯ ನೃತ್ಯ ನಡೆಯಲಿ" ಎಂದು
ಅರಸನಿತ್ತನು ಆಣತಿ ನರ್ತನಕೆ ಮುಂದು.
"ರೂಪಿಣಿಯ ನೋಡಿ ಸವಿಯಲಿ ಕವಿಯು"
ಎಂದು ನುಡಿದನು ಅರಸ, ಚಾಟಿನಲಿ ಎಣೆಯು
ನರ್ತಕಿಗೆ ಹೊರಟಿತು, ರಾಜನಾಮಂತ್ರಣ
ಕವಿಹೃದಯ ಒಡೆದಿತ್ತು ಕೇಳೀನಿರೂಪಣ
ಪ್ರಾರ್ಥಿಸಿದನವನು ಮನಸಿನೊಳಗಂದು
"ಎನ್ನ ಭಾವನೆ ಮುಂದೆ ಹೊರಗೆಡಹದಿರಲೆಂದು."

ಝಣಝಣರ ನೂಪುರಧ್ವನಿ ಕೇಳಿಬಂತಲ್ಲಿ
ತಾಳಕ್ಕೆ ಒರೆಯಾಗಿ ಪೈಜಣವ ಬಾರಿಸಿದರಲ್ಲಿ
ಕವಿಮೊಗದಿಕೂಡಿತ್ತು ಬರಿ ಬವಣೆಶೂನ್ಯ,
ಮಿಂಚಿತ್ತು ಝಣರದನಿ ರಾಜಸಭೆಗಣ್ಯ
ರೂಪಮಾಧುರ್ಯ, ಕ್ರೀಡಿಸಿತು ರಾಜಸಭೆ
ಚಂಚಲಾಕೃತಿ ಬೆರಗು ವಂಚಿಸಿತು ಕವಿಪ್ರಭೆ;
ರಾಜನಿತ್ತನು ಚಂಚಲೆಗೆ ಕೊರಳಮಣಿಹಾರ
ಮಿಂಚುಹೊಳೆ ಧರಿಸಿದಳು ಮಣಿಮು ಸ್ವೀಕಾರ.

★ ★ ★ ★

ರಾಜಸಭೆಯಲಿ ಜರುಗಿತು ದಿನವಿಹೀ ನರ್ತನ,
ಮೆಚ್ಚುಗೆಗೆ ಇತ್ತನವ ಕಾಣಿಕಾನೂತನ.
ಎಲ್ಲ ತುಂಬಿದರಲ್ಲಿ, ನರ್ತನಕೆ ಪ್ರೇಕ್ಷನಕೆ,
ಕೇಳದಾದರು ಯಾರು! ಕವಿ ಗಾಯನಾವಾದನಕೆ,
ಕವಿವರ್ಯ ಬಿಟ್ಟುಕೊಟ್ಟನು ಪದವಿ ಸಹಿಸದವನಾಗಿ,
ವೀಣೆ ಹೊರಟಿತು ಹಿಂದೆ ದಣಿಯ ಅನುವಾಗಿ;
ಮುಗಿಲಲ್ಲಿ ಕಾಣಿದವು ಬರಿ ಬವಣೆಶೂನ್ಯ,
ಮರುಗಿ ಸೊರಗಿದನವನು ರಾಜಾಶ್ರಯದಮಾನ್ಯ;
ದಿನಗಳುರಿಳಿತು ಹೀಗೆ, ಹಲವಾರು ವರ್ಷ,
ಮರೆಯದಾದನು ಅವನು ಆ ನೋವಗಾತ್ರ;
ಅಲೆದು ಬಳಲಿದನು ಹಲವಾರು ವರ್ಷಪರ್ಯಂತ,
ತಿರುಗಿ ಸೇರಿದನವನು ಪುರಭವನ ಜಯವಂತ;
ಸುಳಿದುಬಂದಿತು ಹಿಂದೆ ಮೋಹಕದೃಶ್ಯ,
ಮರುಗಿ ಚಿಂತಿಸಿದನವನು, ಕವಿರಾಜ ಆದರ್ಶ;
ಕೇಳಿಬಂದಿತು ಒಮ್ಮೆ ನೂಪುರಧ್ವನಿ ಮಂದಹಾಸ,
ಅದುವೆಗತಿಸಿತು ಅಲ್ಲಿ, ಪೂರ್ಣ ಇತಿಹಾಸ;
ಮೊಗವೆತ್ತಿ ನೋಡಿದನು ಕವಿ, ರೂಪದರ್ಶನ
ಕಾಂತಿಹೀನಸ್ಫುರಣ ನರ್ತಕೀವರ್ತನ

"ನಾನೇ ನರ್ತಕಿ; ನಿನ್ನ ಪ್ರೇಯಸಿ" ಎಂದು ನುಡಿದಳಾರಮಣಿ
"ಬಂದೆನಿಲ್ಲಿಗೆ ಕಾಣಬಯಸಲು" ಎಂದಳಾರೂಪಿಣಿ
"ಬಂದೆ ಏತಕೆ? ನೀನೆ, ಚಪಲಮತಿ"
"ಹೀನೆ! ಮರೆಯಾಗೆಂದು" ನುಡಿದನು ರಾಜಮುಕುಟಪತಿ
"ರಾಜ ಸಿಲುಕಿದ ನಿನ್ನ ಅದ್ವಿತೀಮೋಹಜಾಲದಲಿ,
ನೀನೆ ಬೆಳೆಸಿದೆ ದೇಹ ಪೂರ್ಣಾಶ್ರಯದತೆಕ್ಕೆಯಲಿ;
ನಿನ್ನೀರೂಪ ಮರುಳರಲಿ ಉದರಾಶ್ರಯ,
ರಾಜಸಭೆಯಲಿ ತೋರಿರುವೆ ನೀನೀ ಅತಿಶಯ;
ತೊಲಗು ತೊಲಗಿಲ್ಲಿಂದ, ಪ್ರಣಯವಿಕ್ರಯಿಣಿ!
ಮರೆಯುವೆನು ಈ ರೂಪಧಿಕ್ಕಾರ! ನೀ ಅಭಿಸಾರಿಣಿ!"
ಜರೆದು ನಡೆದುಬಿಟ್ಟನು, ಕವಿಯು; ನರ್ತಕಿಯ ತ್ಯಜಿಸಿ
ದೃಷ್ಟಾಂತ ಏಕವನು ಸೃಷ್ಟಿಯಲಿ ನಡೆಸಿ;
ಮುಗಿದಿತ್ತು ಇಲ್ಲಿಗೆ, ನಿರಾಕರಣೆ ಪೂರ್ತಿ;
ಇಳೆಯಲ್ಲಿ ಮೆರೆಸಿದನು ರಾಜಕವಿಮಹೋನ್ನತಿ.

---

# ನದಿ - ನಾವೆ

ನಿಬಿಡವನದಿ, ಹರಿವನದಿಯು
ಸೊಗವತೋರಿತು.
ಮುಗಿಲತಿಳಿವು, ಬಾನತಳುಕು
ದಾರಿತೋರಿತು.
ನದಿಯನೇರಿ, ನೀರಹಾಯ್ದು
ದೋಣಿಸಾಗಿತು.

ಪಡುವಬೆಳಕು, ಉದಯಭಾನು
ಮುಗಿಲನೇರಿತು.
ಬಾನಚಲುವು, ಬಯಲಬಣ್ಣ
ಮೆರುಗುತೋರಿತು.
ದಿಗಂತವೇರಿ, ಧಾಮತೋರಿ
ದೋಣಿಸಾಗಿತು.

ವನದನಡುವೆ, ಗೆಲುವತೋರಿ
ಹಕ್ಕಿಹಾಡಿತು.
ರವಿಯರೇಣು, ಕಾಂತಿಕಿರಣ
ಭುವಿಯಬೆಳಗಿತು.
ದೋಣಿಹಾಯ್ದು, ತೀವ್ರಸಾಗಿ
ದಡವಸೇರಿತು.

---

# ಮೇಘಮಾಲೆ

೧

ನೀಲಗಗನ, ಮೇಘಮಾಲೆ
ಚಲಿಸುತಿರುವುದು
ಹಸುರುಹೊಲದ ಮೇಲೆಹಾಯ್ದು
ಸಾಗುತಿರುವುದು
ತೆಂಕಲಿನಗಾಳಿ ಗೆಲುವ
ಬೀರುತಿರುವುದು
ಶಾಂತಿಸಮರ ಸಾರವನ್ನು
ತೋರುತಿರುವುದು.

೨

ನೀಲಗಗನ, ಮೇಘಮಾಲೆ
ಚಲಿಸುತಿರುವುದು
ಹೊಲದಮೇಲೆ ತ್ವರಿತದಿಂದ
ತೂರುತಿರುವುದು
ಪಡುವಕೆಂಪು ಕಾಂತಿಯನ್ನು
ಬೆಳಗುತಿರುವುದು
ನಿಸರ್ಗನಿಯಮ ನೇಮದಿಂದ
ನಲಿದಾಡುತಿರುವುದು.

೩

ನೀಲಗಗನ, ಮೇಘಮಾಲೆ
ಚಲಿಸುತಿರುವುದು
ಹಸುರುಹೊಲದ ಮಧುರವನ್ನು
ಹೊರಸೂಸುತಿರುವುದು
ನಿಶೆಯ ಛಾಯೆಸೆರಗು ಭುವಿಯ
ತೀಡುತಿರುವುದು
ನೀಲಗಗನ ಸಾರಚುಕ್ಕಿ
ಮಿನುಗುತಿರುವುದು.

# ಮಾಯವತಿ

ಮಾಯೆ, ಛಾಯೆ, ಮೆರೆಸಿಬಂದೆಯಾ !
ಚಂದ್ರಮುಖಿ, ಸೌಮ್ಯಸಖಿ
ವಸಂತದೆಡೆಗೆ, ಸುಮುದಕಡೆಗೆ
ಸೇರಿಬಂದೆಯಾ! ಮಾಯೆ ! ಛಾಯೆ !
ಮೆರೆಸಿಬಂದೆಯಾ! ಸಖನಕೂಡಿ
ಹರುಷತಂದೆಯಾ !

ಚಲುವ ಅರಸಿ ನೀನು, ಮಾಯೆ !
ಧರೆಯ ಬೆಳಗಿ ಸುಳಿದೆ, ತಾಯೆ !
ಮಾಯವತಿ, ಛಾಯೆಸತಿ
ಮೆರೆಸಿಬಂದೆಯಾ! ರಾಗಿಣೀ ನೀನು,
ಮಾಯೆ, ಛಾಯೆ! ಸಖನಕೂಡಿ
ಹರುಷತಂದೆಯಾ !

ತುಂಬಬಯಲು, ಕೆಂಪುನೆಳಲು
ನಿನ್ನರಂಗಮಾಯೆ ! ವೈಬಣ್ಣ ಹೊಳೆಸಿ
ಮಿಂಚು ಕಣ್ಣಸೆಳೆಸಿ, ಸುಳಿದೆ ವನಿತೆ
ತೋರಿ ಘನತೆ, ಮಾಯೆ, ಛಾಯೆ !
ಮೆರೆಸಿಬಂದೆಯಾ! ಸಖನಕೂಡಿ
ಹರುಷತಂದೆಯಾ !

ತಳಿರಕೊನೆಯು, ಉಲಿವಗಿಳಿಯ
    ನೆಲೆಯು ನಿನ್ನದು, ಸ್ವರ್ಣತೆರದಿ
    ಮೆರಗಿಕೆಳದಿ, ಹೊಳೆದೆ ಚಲುವೆ
ನೀನು ಭುವನೆ, ಮಾಯೆ, ಛಾಯೆ!
ಮೆರೆಸಿಬಂದೆಯಾ! ಸಖನಕೂಡಿ
    ಹರುಷತಂದೆಯಾ!

ರಾಗಧಾಟಿಯಲ್ಲಿ, ಪ್ರೀತಿಮೇಳದಲ್ಲಿ
    ನಿನ್ನಕೂಡಿದೆ, ನಾದಮಯ
    ತಾಳಲಯ, ನಿನ್ನಸೇರಿದೆ
ನೀನು, ವಾಹಿನಿ! ಮಾಯೆ, ಛಾಯೆ!
ಮೆರೆಸಿಬಂದೆಯಾ! ಸಖನಕೂಡಿ
    ಹರುಷತಂದೆಯಾ!

---

# ತಟನಿತೀರದಲಿ ?

ತಟನಿತೀರದಲಿ ವಟವನೇರದಲಿ
ಸುಳಿಗಾಳಿ ಸುಳಿದೆದ್ದು ನೀಳಿಸಿತ್ತು.
ಪಲ್ಲವದ ಲಹರಿ ಮೆಲುವೆದ್ದು ನಿವಿರಿ
ನೇಸರಲಿ ಮೋದವನು ಎಸೆದುಸುತ್ತು.
ಪಡುವಲದ ನೆಳಲು ಮೂಡಲದ ಬಯಲ
ಕೂಡಿತಿಮಿರದಲಿ ಮೂಡಿಸಿತ್ತು.
ಮುಗಿಲಲ್ಲಿಕಿರಣ ನಿಗಿನಿಗಿದುಸ್ಫುರಣ
ರಜನಿರಂಗಿನಲಿ ತೇಜಿಸಿತ್ತು.
ತಿಳಿಹೊಳೆಯುವಾಹಿನಿ ಬಳುಬಳುಕಿಮಾನಿನಿ
ದುಮುಕಿದಳು ಪಾತ್ರದಲಿ ಹೆಮ್ಮೆಯಲ್ಲಿ.
ಮುಗಿಲಮಾಯೆಯಲಿ ಗಗನನಿಶೆಯಲಿ
ಮುಬ್ಬುಮುಸುಕಿತು ಪ್ರಭೆಯ ಲೀಲೆಯಲ್ಲಿ.
ಸುಳಿಗೆ ಬಿರುಗಾಳಿ ನಳಿಗೆ ಎದುರಾಳಿ
ಭರದಿಮುಗಿಲಿನಲಿ ಜಾರಿತ್ತು.
ಗುಡುಗುಸಿಡಿಲುಗಳು ತಡಿಯುಪಡಿನೆಳಲ
ಅಬ್ಬರಿಸಿ ಜರ್ಜರಿದು ಗರ್ಜಿಸಿತ್ತು.
ಹನಿಹನಿಯಧಾರೆ ಅನಿಲವೃಷ್ಟಿಧಾರೆ
ತೀರದಲಿ ಸುರಿದು ಹರಿದಿತ್ತು.
ಕುಟೀರವಾಸದಲಿ ತಟನಿತೀರದಲಿ
ಚಲುವ ತಾಂಡವನೃತ್ಯ ಕ್ರೀಡಿಸಿತ್ತು.

---

# ಕವಿತಾದೇವಿಗೆ—

ಕವಿತಾದೇವಿ ಕಲ್ಯಾಣಿ
ಪದತಲದಿ ಮಣಿದೆ,
ವಾಣಿ ವಾಗ್ದೇವಿ !
ಚಿರಸಖಸಂಗಿನಿ ನೀನು,
ಭಾವೋಪಾಸಕನು ನಾನು ;
ಕಾವ್ಯರಚಿಸಿದೆ ದೇವಿ !
ಮನ್ನಣೆಯಪಡೆದು.
ಸಿರಿಗೆ ತೌರೂರು ನಿನ್ನನಾಡು,
ಕಲೆಗೆ ಅದು ಸೃಷ್ಟಿಬೀಡು.
ಸ್ಫೂರ್ತಿತೋರಿಹೆ ನೀನು
ಬಹುವೇಳೆ ಮಾಯೆ !
ಮುಡುಪಾಗಿ ಅರ್ಪಿಸುವೆ,
ಈ ಕಿರುಗೀತೆ ತಾಯೆ !
ಚಲುವಗನ್ನಿಕೆ ನಿನಗೆ,
ಕವಿಕೃತಿಯೆ ಉಡುಪು ;
ಕಾವ್ಯಮನ್ನಣೆ ನನಗೆ,
ಅತಿರೂಪ ಸೊಗಸು.

"ಗನಸುಕಾಣುತ ಸೃಷ್ಟಿಯಲಿ
ಮುಳಿದಿಹೆನು" ನಾನೆಂದು,
ಜನರು ನುಡಿದರು ವಾಣಿ !
ವೀಣೆ ಮೀಟುತಿರಲು
ಕವಿಯ ಕಲ್ಪನೆಗವರು
ಎಟಕುವರೆ ? ದೇವಿ !
ಬಾಳಹೋರಳಾಟದಲಿ
ಮಿಡುಕುವರು ಅವರು.
ಅವರಿಗೇತಕೆ ನಿನ್ನಗೊಡವೆ ?
ಅವರಿಗದೆ ಒಂದೇ - ಬಾಳ -
ಹೋರಾಟದೊಲುಮೆ.
ನನಗಿದೆ ಮಧುವನದ
ನಿನ್ನ ಸುಧೆಮಿಗೆಯು.
ನನಗೆ ಇನ್ನೇನಿತರ ಭಯವು ?
ವೀಣಾಪಾಣಿ ಸಂಪೂರ್ಣೆ ;
ಯೋಗಸಾಧನದಿ - ನಿನ್ನ
ರೂಪಾರಾಧನದಿ ಕೂಡಿರುವೆ,
ಧನ್ಯ! ನಾನಿಂದು ಬಹುಮಾನ್ಯ !

---

## ಅಂತ್ಯದರ್ಶನ

ದೇವಿಮಂದಿರದಿ ನೆರೆದಿದ್ದರೆಲ್ಲ,
ಕಾಣಿಕೆಯನೊಪ್ಪಿಸಲು ಬಗೆಬಗೆಯ ಹೊರೆಯಿಂದ.
ನೀರೆನೀರೆಯರಲ್ಲಿ, ಬೆಳಗಿಸಿದರಲ್ಲಿ
ನೋಡರ ಸೋಜಿಗವೆತ್ತಿ ಮೂರ್ತಿಸುತ್ತಿ.
ಮಾ–ಪೂಜೆ ಉತ್ಸವವು ಮಂದಿರದಿಯೆಂದು
ನೆರೆನಾಡ ಜನರೆಲ್ಲ ಮಂದಿರದಿ ತುಂಬಿದರು,
ಕದಳಿಕಪ್ಪುರವ ಅರ್ಪಿಸಲು ಬಕುತಿಯಿಂದ.
ಭಾವುಕರು ಗಾಯಕರು ಸೇರಿದ್ದರಲ್ಲಿ
ಮೂರ್ತಿ ಉತ್ಸವ ದಿನದ ತೊಡಗಿನಲ್ಲಿ.
ಮಂದಿರದಿ ಗದ್ದಲವು ಬಹುವಿತ್ತು,
ವೈಭವದಿ ಉತ್ಸವವು ಜರುಗಲಿತ್ತು.

ಕಲೆದೇವಿ ನೃತ್ಯಾಂಗಿ ಭೈರವಿಯ ಬರುವು,
ಮಂದಿರಕೆ ತಂದುದು ಪ್ರಭೆಮೂಡಿ ಮೆರುಗು.
ಸದ್ದುಗದ್ದಲ ಒಮ್ಮೆ ಅಡಗಿದುದುವಲ್ಲಿ,
ಪ್ರಮುಖಕರ್ತನು ಹೆಜ್ಜೆ ಮಂದಿರದಿ ನೆಡುವಲ್ಲಿ.
ಮಂಗಳವ ಊದಿದನು ಮಂದಿರದಿ ಮೇಳದವ
ದೀವಿಗೆಯು ಎರಚಿದವು ಕಾಂತಿಯನುಬೀರಿ,
ಮೂರ್ತಿಮೊಗದಾವರೆಯು ಮೇರೆಮೀರಿ.
ದೇವಿಗಾಯಿತು ಸ್ನಾನ ಪನ್ನೀರಿನಿಂದ,
ಕೈಂಕರ್ಯಸಾಧನವು ಅರ್ಚಕನನಿಂದ.
ಪುಷ್ಪಫಲದರ್ಪಣವು ಮೂರ್ತಿಗಾಯ್ತು,
ಭಾವಭಕುತರ ಹರಕೆ ಅಂದು ಪೂರ್ತಿಯಾಯ್ತು.
ಮಾ–ಪೂಜೆ ಉತ್ಸವದ ಕಟ್ಟಳೆಯು ಕಡೆಗೆ ಉಳಿದಿತ್ತು,
ಪ್ರಾಚೀನಪದ್ಧತಿಗೆ ಮಂದಿರವು ಎಡೆಗೊಟ್ಟಿತ್ತು;
ನರ್ತಕಿಯ ನರ್ತನವು ದೇವಿ ಮೀಸಲಾಗಿತ್ತು.
ನೂಪುರದ, ಕಂಕಣದ, ಝುಂಕೃತಿಯ ಸಡಿಲು
ಹೊರೆಯಾಗಿ ಮೆರಗಾಗಿ ಮೂಡುತ್ತಬಂತು,
ಮೌನ ಮಂದಿರದಲ್ಲಿ ಗಂಭೀರವನು ತುಂಬಿ.
ದೇವಿಗೆದುರಾಗಿ ಮಣಿದೆದ್ದು ಭಕ್ತಿಯಲಿ
ಮುದುಭಾವಮೊಗದಳೆದು ನರ್ತಿಸಿದಳಂದು,
ಹೊಸನೋಟ, ವಿನ್ಯಾಸ, ಭೂಮಿಕೆಯತಳೆದು ;
ರಾಗಮಯ, ತಾಳಲಯ, ಭಾವಮಯ ದರ್ಶನದಿ
ಮಂದಿರದಿ ಮುಳುಗಿದರು ಜನರೆಲ್ಲಎಲ್ಲ.
ಮಂಗಳದದೇವಿಗೆ ಮುಗಿದಿತ್ತು ಸೇವನೆ,
ನರ್ತನಾನಂತರದ ಪೂರ್ಣದಲ್ಲಿ.
ಮಂದಿರದಿ ನೆರೆದಿದ್ದ ಗುಂಪೆಲ್ಲ ಸರಿದು,
ಹಾಯ್ದಿತ್ತು ನೆನೆಯುತ್ತ ದೃಶ್ಯವನು ಬಗೆದು.

ಹರಿದಿತ್ತು "ಹುಚ್ಚುಹೊಳೆ" ಮನಬಂದದೆಡೆಗೆ
ವರ್ಷಧಾರೆಯವೇಗ ಮುನ್ನುಗ್ಗುವಂತೆ.
ಹೊಸಲ ಮೆಟ್ಟಿದನೊಬ್ಬ ಹೊಗಳಿದನುಮುನ್ನ
ನರ್ತಕಿಯ ನರ್ತನವದತಿಶಯದಿ ಪೂರ್ಣ.
ಮುನ್ನಡೆದ ಮತ್ತೊಬ್ಬ ನಿಂತಲ್ಲಿಯೆ ತಾನು
ನರ್ತಕಿಯ ಒಲುವಯ್ಯಾರವನು ಬಿತ್ತರಿಸುತ.
ನಡೆಗಾಲುಮಾತಿನಾಮುಳಿಯಲ್ಲಿ ತಾನೆ?
ಹೊಗಳಿಕೆಯ ತೆಗಳಿಕೆಯ ತಾಕಲಾಟ!
ನೋಟವಿನ್ಯಾಸಗಳು ಮುಗಿದುವಿಲ್ಲಿ.
ಮೌನಪಥವನುತುಳಿದ ಮಗದೊಬ್ಬ ನಿಂತು
"ನರ್ತನಸಾರಸಾರವು ಈಗ ಜಾರಿಣಿಯ ಹಾವಭಾವವು"ಎಂದು
ನಡೆದುಹಿಡಿದನು ಪಥವ ತೀರ್ಮಾನವಲ್ಲಿ.
ಹೊಗಳಿಕೆಯು ತೆಗಳಿಕೆಯು ಮುಂದೂಡುತಿತ್ತು
ಪೂರ್ಣದೃಶ್ಯದ ರೀತಿನೀತಿಯಲ್ಲಿ.
ಅಂಕದಲಿ ಕಲೆಗಾಗಿ ಮೆರೆದವರು ಎಲ್ಲಾ
ಜರಿದುನುಡಿದರು ಅಂತ್ಯದಲಿ ಕೊಂಕೆಯಿಂದ.
ಸದ್ದುಗದ್ದಲವಡಗಿ, ಶಾಂತಿನೆಲೆಸ್ಥಾಪನೆಯು
ಮಂದಿರದಿ ಸ್ಥಿರವಾಯ್ತು ಜನ ಸರಿದಮೇಲೆ.
ನೀರವವ ರಾತ್ರಿಯಲಿ ಮೂಡಿಬಂದನು ಚಂದ್ರ
ಕಾಂತಿಕಳೆಯನುಬೀರಿ ಮುಗಿಲಿನಿಂದ.
ದೇವಿಮಂದಿರಕೀಗ ಪೂಜೆದರ್ಶನಕೆಂದು
ಬಂದಳಲ್ಲಿಗೆ **ಭೈರವಿ,** ಖಿನ್ನಳಾಗಿ;
ಹೊಸರೀತಿ ದರ್ಶನದ ಹಾದಿಯನು ತೋರಿ.
ನರ್ತಕಿಯಮೊಗದಾ ಚೆಲುವಿನಾನೆಲೆಯು,
ದುಮ್ಮಾನಮುಸುಕಿನಲಿ ಕಂದಿಹೋಗಿ.
ಮೂಢಮಂದಿಯನಡುವೆ ಪೂಜೆದರ್ಶನವೇಕೆ?

ಎಂದು ಬಾಗಿದಳವಳು ದೇವಿಗೆದುರಾಗಿ.
ದೈನ್ಯಮೌನದಮೊಗವು ತೋರುತಿತ್ತಲಿ ಮನದ
ನಿಶ್ಚಿತಾರ್ಥದಪರಿಯ ಅಂತ್ಯವನ್ನು.
ಮೊರೆದು ಬೇಡಿದಳಂದು ದೇವಿಯನು ಕೋರಿ
"ಕಲಿತುನಲಿದಿರುವೆ ಕಲೆಯನೆಲೆಯನು ದೇವಿ!
ನಿನ್ನ ಕೃಪೆ ಮಹಿಮೆ ಹೆಗ್ಗಳಿಕೆಯಿಂದ.
ಜೀವಬಾಳಿನಕೊನೆಯು ಮಿಗಿದೆರಡುದಿನಗಳಲಿ
ಕೀರ್ತಿಸಂದುದುದೆನಗೆ ಶ್ಲಾಘ್ಯರಿಂದ.
ಉಚ್ಚಶೀಲದ ಕಲೆಗೆ ಕೊಂಕುನುಡಿವರು ಜನರು
ಗುರುತರದ ಕತೆಯಕಟ್ಟಿ.
ಬಾಳಲಾರೆನುಮುಂದೆ ಈ ಕೀರ್ತಿಭಾರವ ಹೊತ್ತು
ಘೋರನುಡಿವರ ಬಳಿಸಿ ಯುಕ್ತದಿಂದ.
ಬಳಲಿರುವೆ ಕಲೆಯಸೇವಿಸಿ ನಾನು
ಸರ್ವವನು ಬದಿಗಿಟ್ಟು ಪೂಜೆಸಲಿಸಿ.
ಅಂತ್ಯದರ್ಶನ ನೀಡಿ ದಯೆಯಪಾಲಿಸುಯೆಂದು"
ದೀರ್ಘನಮಿಸಿದಳವಳು ದೇವಿಯನ್ನು.
ಮಂದಿರವ ತ್ಯಜಿಸಿದಳು ಭೈರವಿಯು ಮೆಲ್ಲನೆ
ತಟನಿತೀರದ ಹಾದಿಹಿಡಿದು.
ನೀರವವರಾತ್ರಿಯಲಿ ಮುಗಿಲಲ್ಲಿ ಕಿರಣ
ಚಲ್ಲಿತ್ತು ಕಾಂತಿಯನು ತಟನಿಯಾನೀರ.
ಮೆಲ್ಲಮೆಲ್ಲನೆ ಗಾಳಿ ಸುಳಿದಿತ್ತು ಪ್ರಕೃತಿಯಲಿ
ಆ ನಿಶೆಯಾಸೆರಗ ರಾತ್ರಿಯಲ್ಲಿ.
ಮಿಣುಕುಹುಳುಗಳು ಚಣದಿ ಚಮುಕಿಸಿ
ನುಸುಳಿತ್ತು ಮೆರುಗುತ್ತ ಪರಿಯಲ್ಲಿ ತೂರಿ.
ಮಿಂಚುಸಿಡಿಲುಗಳೊಮ್ಮೆ ತೋರಿತ್ತು ಮಂಡಲದಿ
ವರ್ಷಧಾರೆಯ ಭಯುವ ಮುಂದೆಸೂಸಿ.

ತಟನಿಯನು ಸೇರಿದಳು ನರ್ತಕಿಯು ಮೌನದಲಿ
ನಿಶ್ಚಿಸಿದತಾತ್ಪರ್ಯ ಮನದಿನೆಲೆಸಿ,
ತ್ಯಜಿಸಿದಳು ಆಭರಣ ಬಹುಮೂಲ್ಯವನ್ನು
ಭೂತಲದಿ ಕೆಳೆಗಿಟ್ಟು ಭಗ್ನನೆದ್ದು ;
ಸುತ್ತುಮುತ್ತಲುತಿರುಗಿ ಅನುಮತಿಯಪಡೆದಂತೆ
ದುಮುಕಿದಳು ತಟನಿಯಾ ಅಗಾಧಜಲಧಿಗೆ
ಶಾಶ್ವತಸ್ಥಿತಿಯ ವ್ಯಾಪದೊಳಗೆ.
ನಡುನೀರು ಬಡಿದೆದ್ದು ತಿರುವಾಗಿಸುಳಿದು
ಪಾರಾಗಿ ನಡೆದಿತ್ತು ಅವಘಡವ ಮುಗಿಸಿ,
ಭೂತಲದಿ ಕೆಳೆಗಿಟ್ಟ ಬಹುಮೂಲ್ಯಭರಣ
ಭೈರವಿಯ ದರ್ಶನದ ಸ್ಮರಣೀಯವಾಯ್ತು.

---

# ನಮ್ಮಲ್ಲಿ ದೊರೆಯುವ ಸಂಗೀತ ಪುಸ್ತಕಗಳು

**ಕನ್ನಡಕ್ಷರದ್ದು**

| | | ರೂ. | ಆ. |
|---|---|---|---|
| ಹಾರ್ಮೋನಿಯಂ ಮತ್ತು ಸಂಗೀತ ಸ್ವಯಂಬೋಧೆ | ... | 0 | 12 |
| ಸಂಗೀತಶಾಸ್ತ್ರ ಪ್ರವೇಶದಾಯಿನಿ | ... | 2 | 4 |
| ಸಂಗೀತಬೋಧನಾಕ್ರಮ | .... | 0 | 12 |
| ಸಂಗೀತಪಾರಿಜಾತ | .... | 0 | 6 |
| ನಾಟಕಶಿರೋಮಣಿ ವರದಾಚಾರ್ಯರ ಪ್ರಹ್ಲಾದಚರಿತ್ರೆಯ ಹಾಡುಗಳು (ಸ್ವರಚಿಹ್ನೆ ಸಹಿತ) | ... | 0 | 6 |
| ಹಾರ್ಮೋನಿಯಂ ಗೈಡು | ... | 0 | 8 |
| ತಾಳಪ್ರಸ್ತಾರಸಾಗರ (ಮೃದಂಗವಿದ್ಯಾವಿನೋದ) | .. | 2 | 4 |
| ಬಾಲಿಕಾಸೀತಿಮಾಲಿಕೆ | ... | 0 | 2 |
| ಬಾಲಿಕಾಗೀತ ಮುಕ್ತಾಕಲಾಪ | .... | 0 | 5 |
| ಸಂಗೀತಾಮೃತಸಾರ (ವೀಣಾ ವೆಂಕಟಗಿರಿಯಪ್ಪ) | ... | 2 | 15 |
| ಗಾನಾಮೃತ (ಬೆಳಕವಾಡಿ ಶ್ರೀನಿವಾಸಯ್ಯಂಗಾರ್) | .... | 2 | 1 |
| ಶ್ರೀ ಚಾಮುಂಡಾಂಬಾಷ್ಟೋತ್ತರ ಶತನಾಮಸಂಕೀರ್ತನಾವಳಿ ೧ನೇ ಭಾಗ (ಎಲ್. ಮುತ್ತಯ್ಯಭಾಗವತರ್) | ... | 2 | 4 |
| ಮಕ್ಕಳ ಹಾಡುಗಳು | ... | 0 | 5 |
| ಹರಿದಾಸರ ಕೃತಿಗಳು (ಎಲ್. ರಾಜಾರಾವ್) | ... | 0 | 12 |

**ತೆಲುಗಕ್ಷರದ್ದು**

| | | | |
|---|---|---|---|
| ಸಂಗೀತವಿದ್ಯಾದರ್ಪಣಮು | .. | 4 | 0 |
| ಗಾಂಧರ್ವಕಲ್ಪವಲ್ಲಿ | .... | 3 | 4 |
| ಸಂಗೀತಕೃತಿದರ್ಪಣ ಭಾಗ ೧ ಮತ್ತು ೨—ಪ್ರತಿ ಭಾಗಕ್ಕೂ | .... | 2 | 0 |
| ಸ್ವರವರ್ಣಸುಧಾಸಿಧಿ | ... | 1 | 8 |
| ಸಂಗೀತ ಸ್ವರಪ್ರಸ್ತಾರಸಾಗರ | .... | 0 | 8 |
| ಸಂಗೀತಸಂಪ್ರದಾಯಪ್ರದರ್ಶಿನಿ (ಒಟ್ಟು ೩ ಭಾಗಗಳು) | ... | 12 | 8 |
| ಸಂಗೀತಸುಧಾಂಬುಧಿ | ... | 3 | 4 |
| ತ್ಯಾಗರಾಜಕೀರ್ತನೆ (ಸಾಹಿತ್ಯ ಮಾತ್ರ) | .... | 3 | 4 |
| ಹಿಂದೂಸ್ಥಾನಿ ಗಾನಮು (ಟಿ. ರಾಮಚಂದರ್) | .... | 2 | 8 |
| ಗಾನಭಾಸ್ಕರಮು (ಕೆ. ವಿ. ಶ್ರೀನಿವಾಸಯ್ಯಂಗಾರ್) | .... | 7 | 8 |
| ಶ್ರೀ ತ್ಯಾಗರಾಜ ಚರಿತ್ರ (ವಿಂಜಮೂರಿ ವರಹಾ ನರಸಿಂಹಾಚಾರ್) | ... | 1 | 6 |
| ಶ್ರೀ ದೀಕ್ಷಿತುಲ ಚರಿತ್ರ ,, | ... | 0 | 8 |
| ೨೨ ಕೃತುಲು ಸ್ವರಾವಳಿ ,, | .... | 0 | 10 |
| ತಾಳಲಕ್ಷಣಮು ,, | ... | 0 | 10 |
| ಪಲ್ಲವೋಲ್ಲಾಸಿನೀ ,, | .... | 0 | 8 |
| ಗಾನಶಾಸ್ತ್ರ ಪ್ರಶ್ನೋತ್ತರಾವಳಿ | .. | 1 | 4 |
| ಸಂಗೀತ ಲಕ್ಷಣಸಂಗ್ರಹಮು ೧ನೇ ಭಾಗ | ... | 1 | 4 |
| ಶತರಾಗ ರತ್ನಮಾಲಿಕಾ (ವೆಂಕಟನಾರಾಯಣಾಚಾರ್ಯ) | .... | 4 | 0 |
| ಪಲ್ಲವಿಸ್ವರ ಕಲ್ಪವಲ್ಲಿ | .... | 3 | 0 |

**ಎಚ್. ಎನ್. ರಾವ್ ಬ್ರದರ್ಸ್, ಬೆಂಗಳೂರು ಸಿಟಿ**